IslamHouse.com

# ಅಲ್ ಉಸೂಲು ಸ್ಸಲಾಸ (ಮೂರು ಮೂಲಭೂತ ನಿಯಮಗಳು)



ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್

# ಅಲ್‌ಉಸೂಲು ಸ್ಸಲಾಸಃ

## (ಮೂರು ಮೂಲಭೂತ ನಿಯಮಗಳು)

## [ ثلاثة الأصول وأدلتها ]

**[Kannada – ಕನ್ನಡ – كنادي ]**


**ಇಮಾಮ್ ಮುಹಮ್ಮದ್ ಇಬ್ನ್ ಅಬ್ದುಲ್ ವಹ್ಹಾಬ್ (ﷺ)**

**للإمام محمد بن عبد الوهاب رحمه الله تعالى**

**ಅನುವಾದ: ಮುಹಮ್ಮದ್ ಹಂಝಾ ಪುತ್ತೂರು**

**ترجمة: محمد حمزة بتوري**



www.islamhouse.com

**1435 – 2014**

## ಒಳಪುಟಗಳಲ್ಲಿ...


| | | |
|---|---|---|
| | ಪ್ರಸ್ತಾವನೆ | 3 |
| 1. | ಮೊದಲನೆಯ ನಿಯಮ: ರಬ್ಬ್‌ನನ್ನು ಅರಿಯುವುದು | 8 |
| 2. | ಎರಡನೆಯ ನಿಯಮ: ಇಸ್ಲಾಮ್ ಧರ್ಮವನ್ನು ಪುರಾವೆಸಹಿತ ಅರಿಯುವುದು | 15 |
| 3. | ಮೂರನೆಯ ನಿಯಮ: ನಿಮ್ಮ ಪ್ರವಾದಿ ಮುಹಮ್ಮದ್(ﷺ)ರವರನ್ನು ಅರಿಯುವುದು | 24 |

بِسْمِ اللهِ الرَّحْمَـنِ الرَّحِيم

# ಪ್ರಸ್ತಾವನೆ

ಅರಿತುಕೋ, –ಅಲ್ಲಾಹು ನಿನ್ನನ್ನು ಅನುಗ್ರಹಿಸಲಿ– ನಾಲ್ಕು ವಿಷಯಗಳನ್ನು ಕಲಿಯುವುದು ನಮ್ಮ ಮೇಲೆ ಕಡ್ಡಾಯವಾಗಿದೆ.

ಮೊದಲನೆಯದು: ಇಲ್ಮ್ (ಜ್ಞಾನ). ಅದು ಅಲ್ಲಾಹನನ್ನು ಅರಿಯುವುದು, ಅವನ ಪ್ರವಾದಿ(ﷺ)ರವರನ್ನು ಅರಿಯುವುದು ಮತ್ತು ಇಸ್ಲಾಮ್ ಧರ್ಮವನ್ನು ಪುರಾವೆಸಹಿತವಾಗಿ ಅರಿಯುವುದು.

ಎರಡನೆಯದು: ಅದರ ಪ್ರಕಾರ ಅಮಲ್ ಮಾಡುವುದು.

ಮೂರನೆಯದು: ಅದರೆಡೆಗೆ ಜನರನ್ನು ಕರೆಯುವುದು.

ನಾಲ್ಕನೆಯದು: ಅದರಿಂದ ಉದ್ಭವಿಸುವ ಕಿರುಕುಳಗಳಲ್ಲಿ ತಾಳ್ಮೆ ವಹಿಸುವುದು. ಇದಕ್ಕಿರುವ ಪುರಾವೆ ಅಲ್ಲಾಹನ ಈ ವಚನಗಳು:

﴿ وَالْعَصْرِ * إِنَّ الْإِنْسَانَ لَفِي خُسْرٍ * إِلَّا الَّذِينَ آمَنُوا وَعَمِلُوا الصَّالِحَاتِ وَتَوَاصَوْا بِالْحَقِّ وَتَوَاصَوْا بِالصَّبْرِ ﴾

**“ಕಾಲದಾಣೆ, ಖಂಡಿತವಾಗಿಯೂ ಮನುಷ್ಯನು ನಷ್ಟದಲ್ಲಿರುವನು. ವಿಶ್ವಾಸ ವಿಟ್ಟವರು, ಸತ್ಕರ್ಮವೆಸಗಿದವರು, ಸತ್ಯದೊಂದಿಗೆ ಪರಸ್ಪರ ಉಪದೇಶ ನೀಡಿದ ವರು ಮತ್ತು ತಾಳ್ಮೆಯೊಂದಿಗೆ ಪರಸ್ಪರ ಉಪದೇಶ ನೀಡಿದವರ ಹೊರತು.” [ಕುರ್‌ಆನ್ ಅಧ್ಯಾಯ 103]**

ಇಮಾಮ್ ಅಶ್ಶಾಫಿಈ(ﷺ) ಹೇಳುತ್ತಾರೆ:

لَوْ مَا أَنْزَلَ اللَّهُ حُجَّةً عَلَى خَلْقِهِ إِلَّا هَذِهِ السُّورَةَ لَكَفَتْهُمْ

**“ಒಂದು ವೇಳೆ ಅಲ್ಲಾಹು ಈ ಅಧ್ಯಾಯದ ಹೊರತು ಬೇರೆ ಯಾವುದೇ ಪುರಾವೆಯನ್ನು ತನ್ನ ಸೃಷ್ಟಿಗಳ ಮೇಲೆ ಅವತೀರ್ಣಗೊಳಿಸದಿರುತ್ತಿದ್ದರೆ ಇದು (ಈ ಅಧ್ಯಾಯ) ಅವರಿಗೆ ಸಾಕಾಗುತ್ತಿತ್ತು.”**

ಇಮಾಮ್ ಅಲ್‌ಬುಖಾರಿ(ﷺ) ಹೇಳುತ್ತಾರೆ:

بَابٌ : الْعِلْمُ قَبْلَ الْقَوْلِ وَالْعَمَلِ وَالدَّلِيلُ قَوْلُهُ تَعَالَى ﴿فَاعْلَمْ أَنَّهُ لَا إِلَهَ إِلَّا اللَّهُ وَاسْتَغْفِرْ لِذَنْبِكَ﴾ فَبَدَأَ بِالْعِلْمِ قَبْلَ الْقَوْلِ وَالْعَمَلِ.

**“ಅಧ್ಯಾಯ: ಇಲ್ಮ್ ಮಾತು ಮತ್ತು ಅಮಲ್‌ಗಿಂತ ಮುಂಚೂಣಿಯಲ್ಲಿದೆ. ಇದಕ್ಕಿರುವ ಪುರಾವೆ ಅಲ್ಲಾಹನ ಈ ವಚನ: ‘ಆದ್ದರಿಂದ ಅರಿತುಕೋ, ಖಂಡಿತವಾಗಿಯೂ ಅಲ್ಲಾಹನ ಹೊರತು ಆರಾಧಿಸಲ್ಪಡಲು ನೈಜ ಹಕ್ಕನ್ನು ಹೊಂದಿದವರಾಗಿ ಯಾರೂ ಇಲ್ಲ ಎಂದು, ಮತ್ತು ನಿನ್ನ ಪಾಪಕ್ಕಾಗಿ ಕ್ಷಮೆಯನ್ನು ಬೇಡು.’ [ಕುರ್‌ಆನ್ 47:19] ಅಲ್ಲಾಹು ಇಲ್ಲಿ ಮಾತು ಮತ್ತು ಅಮಲ್‌ಗಿಂತ ಮೊದಲು ಇಲ್ಮ್‌ನಿಂದ ಆರಂಭಿಸಿದ್ದಾನೆ.”**

ಅರಿತುಕೋ, –ಅಲ್ಲಾಹು ನಿನ್ನನ್ನು ಅನುಗ್ರಹಿಸಲಿ– ಹಾಗೆಯೇ, ಪ್ರತಿಯೊಬ್ಬ ಮುಸ್ಲಿಮ್ ಪುರುಷರ ಮತ್ತು ಸ್ತ್ರೀಯರ ಮೇಲೂ ಈ ಕೆಳಗಿನ ಮೂರು ವಿಷಯಗಳನ್ನು ಕಲಿತು ಅದರ ಪ್ರಕಾರ ಅಮಲ್ ಮಾಡುವುದು ಕೂಡ ಕಡ್ಡಾಯವಾಗಿದೆ.

ಒಂದು: ಅಲ್ಲಾಹು ನಮ್ಮನ್ನು ಸೃಷ್ಟಿಸಿದ್ದಾನೆ ಮತ್ತು ನಮಗೆ ಅನ್ನಾಧಾರಗಳನ್ನು ಒದಗಿಸಿದ್ದಾನೆ. ಅವನು ನಮ್ಮನ್ನೆಂದೂ ನಿರ್ಲಕ್ಷಿಸಿಲ್ಲ. ಬದಲಾಗಿ ಅವನು ನಮ್ಮ ಬಳಿಗೆ ಒಬ್ಬ ಸಂದೇಶವಾಹಕರನ್ನು ಕಳುಹಿಸಿದ್ದಾನೆ. ಆದ್ದರಿಂದ ಯಾರು ಅವರ (ಸಂದೇಶ ವಾಹಕರ) ಆಜ್ಞಾಪಾಲನೆ ಮಾಡುತ್ತಾನೋ ಅವನು ಸ್ವರ್ಗವನ್ನು ಪ್ರವೇಶಿಸಿದನು ಮತ್ತು ಯಾರು ಅವರ (ಸಂದೇಶವಾಹಕರ) ಆಜ್ಞೆಗಳನ್ನು ಉಲ್ಲಂಘಿಸುತ್ತಾನೋ ಅವನು ನರಕವನ್ನು ಪ್ರವೇಶಿಸಿದನು.

ಪುರಾವೆ ಅಲ್ಲಾಹನ ಈ ವಚನ:

﴿إِنَّا أَرْسَلْنَا إِلَيْكُمْ رَسُولًا شَاهِدًا عَلَيْكُمْ كَمَا أَرْسَلْنَا إِلَىٰ فِرْعَوْنَ رَسُولًا * فَعَصَىٰ فِرْعَوْنُ الرَّسُولَ فَأَخَذْنَاهُ أَخْذًا وَبِيلًا ﴾

**"ಖಂಡಿತವಾಗಿಯೂ ನಾವು ನಿಮ್ಮ ಬಳಿಗೆ ನಿಮ್ಮ ಮೇಲೆ ಸಾಕ್ಷಿಯಾಗಿ ಒಬ್ಬ ಸಂದೇಶವಾಹಕರನ್ನು ಕಳುಹಿಸಿರುವೆವು. ಫರೋವನ (ಫಿರ್‌ಔನ್‌ನ) ಬಳಿಗೆ ಒಬ್ಬ ಸಂದೇಶವಾಹಕರನ್ನು ಕಳುಹಿಸಿದಂತೆ. ಆದರೆ ಫರೋವನು ಸಂದೇಶವಾಹಕರ ಆಜ್ಞೋಲ್ಲಂಘನೆ ಮಾಡಿದನು. ಆದ್ದರಿಂದ ನಾವು ಅವನನ್ನು ಹಿಡಿದು ಕಠಿಣವಾಗಿ ಶಿಕ್ಷಿಸಿದೆವು." [ಕುರ್‌ಆನ್ 73:15–16]**

ಎರಡು: (ಅಲ್ಲಾಹನಿಗೆ) ಆಪ್ತರಾಗಿರುವ ಮಲಕ್‌ಗಳನ್ನಾಗಲಿ (ಜನರೆಡೆಗೆ) ಕಳುಹಿಸಲ್ಪಟ್ಟ ಪ್ರವಾದಿಯನ್ನಾಗಲಿ ಅಥವಾ ಅಲ್ಲಾಹನ ಸೃಷ್ಟಿಗಳಲ್ಲಿ ಇತರ ಯಾರನ್ನೇ ಆಗಲಿ, ತನ್ನೊಂದಿಗೆ ಸಹಭಾಗಿಯನ್ನಾಗಿ ಮಾಡುವುದನ್ನು ಅಲ್ಲಾಹು ಎಂದೂ ಇಷ್ಟಪಡುವುದಿಲ್ಲ.

ಪುರಾವೆ ಅಲ್ಲಾಹನ ಈ ವಚನ:

﴿ وَأَنَّ الْمَسَاجِدَ لِلَّهِ فَلَا تَدْعُوا مَعَ اللَّهِ أَحَدًا ﴾

**"ಖಂಡಿತವಾಗಿಯೂ ಮಸೀದಿಗಳು ಅಲ್ಲಾಹನದ್ದಾಗಿವೆ. ಆದ್ದರಿಂದ ನೀವು ಅಲ್ಲಾಹನೊಂದಿಗೆ ಇತರ ಯಾರನ್ನೂ ಪ್ರಾರ್ಥಿಸಬಾರದು." [ಕುರ್‌ಆನ್ 72:18]**

ಮೂರು: ಸಂದೇಶವಾಹಕ(ﷺ)ರವರ ಆಜ್ಞಾಪಾಲನೆ ಮಾಡುವವನಿಗೆ ಮತ್ತು ಆರಾಧನೆಗಳೆಲ್ಲವನ್ನೂ ಅಲ್ಲಾಹನಿಗೆ ಮಾತ್ರ ಸಲ್ಲಿಸುವವನಿಗೆ, ಅಲ್ಲಾಹನಿಗೆ ಮತ್ತು ಸಂದೇಶವಾಹಕರಿಗೆ ವಿರುದ್ಧವಾಗಿ ಚಲಿಸುವವನೊಂದಿಗೆ ಯಾವುದೇ ಗೆಳೆತನವೂ ಇರಬಾರದು. ಅವರು ಆತನ ಆಪ್ತ ಸಂಬಂಧಿಕರಾಗಿದ್ದರೂ ಸರಿ.

ಪುರಾವೆ ಅಲ್ಲಾಹನ ಈ ವಚನ:

﴿لَا تَجِدُ قَوْمًا يُؤْمِنُونَ بِاللَّهِ وَالْيَوْمِ الْآخِرِ يُوَادُّونَ مَنْ حَادَّ اللَّهَ وَرَسُولَهُ وَلَوْ كَانُوا آبَاءَهُمْ أَوْ أَبْنَاءَهُمْ أَوْ إِخْوَانَهُمْ أَوْ عَشِيرَتَهُمْ أُولَـٰئِكَ كَتَبَ فِي قُلُوبِهِمُ الْإِيمَانَ وَأَيَّدَهُمْ بِرُوحٍ مِنْهُ وَيُدْخِلُهُمْ جَنَّاتٍ تَجْرِي مِنْ تَحْتِهَا الْأَنْهَارُ خَالِدِينَ فِيهَا رَضِيَ اللَّهُ عَنْهُمْ وَرَضُوا عَنْهُ أُولَـٰئِكَ حِزْبُ اللَّهِ أَلَا إِنَّ حِزْبَ اللَّهِ هُمُ الْمُفْلِحُونَ﴾

**"ಅಲ್ಲಾಹನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುವ ಒಂದು ಜನತೆಯು ಅಲ್ಲಾಹನಿಗೆ ಮತ್ತು ಅವನ ಸಂದೇಶವಾಹಕರಿಗೆ ವಿರುದ್ಧವಾಗಿ ಚಲಿಸುವವರೊಂದಿಗೆ ಸಖ್ಯ ಬೆಳೆಸುವುದನ್ನು ತಾವು ಕಾಣಲಾರಿರಿ. ಅವರು (ವಿರುದ್ಧವಾಗಿ ಚಲಿಸುವವರು) ಅವರ ತಂದೆಯಂದಿರಾಗಿದ್ದರೂ, ಪುತ್ರರಾಗಿದ್ದರೂ, ಸಹೋದರರಾಗಿದ್ದರೂ ಅಥವಾ ಸಂಬಂಧಿಕರಾಗಿದ್ದರೂ ಸರಿ. ಅವರ ಹೃದಯದಲ್ಲಿ ಅಲ್ಲಾಹು ವಿಶ್ವಾಸವನ್ನು ದಾಖಲಿಸಿದ್ದಾನೆ ಮತ್ತು ತನ್ನ ವತಿಯ ಆತ್ಮದಿಂದ ಅವನು ಅವರನ್ನು ಪ್ರಬಲಗೊಳಿಸಿದ್ದಾನೆ. ತಳಭಾಗದಲ್ಲಿ ಕಾಲುವೆಗಳು ಹರಿಯುವ ಸ್ವರ್ಗೋದ್ಯಾನಗಳಿಗೆ ಅವನು ಅವರನ್ನು ಪ್ರವೇಶ ಮಾಡಿಸುವನು. ಅವರದರಲ್ಲಿ ಶಾಶ್ವತರಾಗಿ ನೆಲೆಸುವರು. ಅಲ್ಲಾಹು ಅವರ ಬಗ್ಗೆ ಸಂತೃಪ್ತನಾಗಿರುವನು ಮತ್ತು ಅವರು ಅವನ (ಅಲ್ಲಾಹನ) ಬಗ್ಗೆ ಸಂತೃಪ್ತರಾಗಿರುವರು. ಅವರೇ ಅಲ್ಲಾಹನ ಪಕ್ಷದವರು. ತಿಳಿಯಿರಿ! ಖಂಡಿತವಾಗಿಯೂ ಅಲ್ಲಾಹನ ಪಕ್ಷದವರು ಯಾರೋ ಅವರೇ ಯಶಸ್ವಿಯಾದವರು." [ಕುರ್‌ಆನ್ 58:22]**

ಅರಿತುಕೋ –ತನ್ನ ಆಜ್ಞಾಪಾಲನೆಯೆಡೆಗೆ ಅಲ್ಲಾಹು ನಿನಗೆ ಮಾರ್ಗದರ್ಶನ ಮಾಡಲಿ– 'ಹನೀಫಿಯ್ಯಃ' ಎಂದರೆ ಅಲ್ಲಾಹನನ್ನು ಮಾತ್ರ ಆರಾಧಿಸುವುದು ಮತ್ತು ಧರ್ಮವನ್ನು ಅವನಿಗೆ ನಿಷ್ಕಳಂಕಗೊಳಿಸುವುದಾಗಿದೆ. ಇದು ಇಬ್ರಾಹೀಮ್(ﷺ)ರವರ ಮಿಲ್ಲತ್ (ಧರ್ಮ) ಆಗಿದೆ. ಸಕಲ ಮಾನವರೂ ಈ ಮಿಲ್ಲತ್ತನ್ನು ಅನುಸರಿಸಬೇಕೆಂದು ಅಲ್ಲಾಹು ಆದೇಶಿಸಿದ್ದಾನೆ. ಅವನು ಮನುಷ್ಯರನ್ನು ಅದಕ್ಕಾಗಿಯೇ ಸೃಷ್ಟಿಸಿದ್ದಾನೆ.

ಅಲ್ಲಾಹು (ಈ ಕೆಳಗಿನ ವಚನದಲ್ಲಿ) ಹೇಳಿದಂತೆ:

﴿وَمَا خَلَقْتُ الْجِنَّ وَالْإِنْسَ إِلَّا لِيَعْبُدُونِ﴾

**“ನನ್ನನ್ನು ಆರಾಧಿಸುವುದಕ್ಕಾಗಿಯಲ್ಲದೆ ಜಿನ್ನ್ ಮತ್ತು ಮನುಷ್ಯರನ್ನು ನಾನು ಸೃಷ್ಟಿಸಿಲ್ಲ.” [ಕುರ್‌ಆನ್ 51:56]**

‘ನನ್ನನ್ನು ಆರಾಧಿಸುವುದಕ್ಕಾಗಿ’ ಎಂದರೆ ಸಕಲ ಆರಾಧನೆಗಳಲ್ಲೂ ನನ್ನನ್ನು ಏಕಾಂಗಿಯನ್ನಾಗಿ ಮಾಡುವುದಕ್ಕಾಗಿ ಎಂದಾಗಿದೆ. ಅಲ್ಲಾಹನ ಆಜ್ಞೆಗಳಲ್ಲಿ ಅತಿ ಪ್ರಮುಖವಾದುದು ತೌಹೀದ್ ಆಗಿದೆ. ಅರ್ಥಾತ್ ಸರ್ವ ಆರಾಧನೆಗಳನ್ನೂ ಅಲ್ಲಾಹನಿಗೆ ಮಾತ್ರ ಸಲ್ಲಿಸುವುದು. ಅವನ ನಿಷೇಧಗಳಲ್ಲಿ ಅತಿ ಪ್ರಮುಖವಾದು ಶಿರ್ಕ್ ಆಗಿದೆ. ಅರ್ಥಾತ್ ಅವನೊಂದಿಗೆ ಅವನ ಹೊರತಾದವರಲ್ಲಿ ಪ್ರಾರ್ಥಿಸು ವುದು.

ಇದಕ್ಕೆ ಪುರಾವೆ ಅಲ್ಲಾಹನ ಈ ವಚನ:

﴿وَاعْبُدُوا اللَّهَ وَلَا تُشْرِكُوا بِهِ شَيْئًا﴾

**“ನೀವು ಅಲಾಹನನ್ನು ಆರಾಧಿಸಿರಿ ಮತ್ತು ಅವನೊಂದಿಗೆ ಏನನ್ನೂ ಸಹಭಾಗಿ ಯನ್ನಾಗಿ ಮಾಡದಿರಿ.” [ಕುರ್‌ಆನ್ 4:36]**

ಮನುಷ್ಯನು ಕಡ್ಡಾಯವಾಗಿ ಅರಿತಿರಬೇಕಾದ ಮೂರು ಮೂಲ ನಿಯಮಗಳು ಯಾವುವೆಂದು ನಿನ್ನೊಂದಿಗೆ ಕೇಳಲಾದರೆ ಹೇಳು:

1. ಮನುಷ್ಯನು ಅವನ ರಬ್ಬನ್ನು ಅರಿಯುವುದು.
2. ಅವನ ಧರ್ಮವನ್ನು ಅರಿಯುವುದು.
3. ಅವನ ಪ್ರವಾದಿಯಾದ ಮುಹಮ್ಮದ್(ﷺ)ರವರನ್ನು ಅರಿಯುವುದು.

# الْأَصْلُ الْأَوَّلُ : مَعْرِفَةُ الرَّبِّ

## ಮೊದಲನೆಯ ನಿಯಮ: ರಬ್ಬ್‌ನನ್ನು ಅರಿಯುವುದು

ನಿನ್ನ ರಬ್ಬ್ ಯಾರು? ಎಂದು ನಿನ್ನೊಡನೆ ಕೇಳಲಾದರೆ ಹೇಳು:

ನನ್ನನ್ನು ಪರಿಪಾಲಿಸುತ್ತಿರುವ ಅಲ್ಲಾಹನೇ ನನ್ನ ರಬ್ಬ್. ಅವನು ತನ್ನ ಔದಾರ್ಯದಿಂದ ಸರ್ವಲೋಕಗಳನ್ನೂ ಪರಿಪಾಲಿಸುತ್ತಿದ್ದಾನೆ. ಅವನು ನನ್ನ ಆರಾಧ್ಯನಾಗಿದ್ದಾನೆ. ಅವನ ಹೊರತು ನನಗೆ ಬೇರೆ ಯಾವ ಆರಾಧ್ಯನೂ ಇಲ್ಲ.

ಪುರಾವೆ ಅಲ್ಲಾಹನ ಈ ವಚನ:

﴿ الْحَمْدُ لِلَّهِ رَبِّ الْعَالَمِينَ ﴾

**"ಸರ್ವಲೋಕಗಳ ಪರಿಪಾಲಕನಾದ ಅಲ್ಲಾಹನಿಗೆ ಸರ್ವಸ್ತುತಿ." [ಕುರ್‌ಆನ್ 1:2]**

ಅಲ್ಲಾಹನನ್ನು ಹೊರತುಪಡಿಸಿದರೆ ಉಳಿದುದೆಲ್ಲವೂ ಲೋಕವಾಗಿದೆ ಮತ್ತು ನಾನು ಆ ಲೋಕದ ಒಂದು ಭಾಗವಾಗಿದ್ದೇನೆ.

ನಿನ್ನ ರಬ್ಬ್‌ನನ್ನು ನೀನು ಯಾವುದರ ಮೂಲಕ ಅರಿತಿರುವೆ? ಎಂದು ನಿನ್ನೊಡನೆ ಕೇಳಲಾದರೆ ಹೇಳು:

ಅವನ ದೃಷ್ಟಾಂತಗಳಿಂದ ಮತ್ತು ಅವನ ಸೃಷ್ಟಿಗಳಿಂದ. ರಾತ್ರಿ, ಹಗಲು, ಸೂರ್ಯ, ಚಂದ್ರ ಇತ್ಯಾದಿ ಅವನ ದೃಷ್ಟಾಂತಗಳಾಗಿವೆ. ಏಳಾಕಾಶಗಳೂ, ಏಳು ಭೂಮಿಗಳೂ, ಅವುಗಳಲ್ಲಿರುವುದೆಲ್ಲವೂ ಮತ್ತು ಅವುಗಳ ನಡುವಿನಲ್ಲಿರು ವುದೆಲ್ಲವೂ ಅವನ ಸೃಷ್ಟಿಗಳಾಗಿವೆ.

ಪುರಾವೆ ಅಲ್ಲಾಹನ ಈ ವಚನ:

﴿ وَمِنْ آيَاتِهِ اللَّيْلُ وَالنَّهَارُ وَالشَّمْسُ وَالْقَمَرُ لَا تَسْجُدُوا لِلشَّمْسِ وَلَا لِلْقَمَرِ وَاسْجُدُوا لِلَّهِ الَّذِي خَلَقَهُنَّ إِنْ كُنْتُمْ إِيَّاهُ تَعْبُدُونَ ﴾

**"ರಾತ್ರಿ, ಹಗಲು, ಸೂರ್ಯ ಮತ್ತು ಚಂದ್ರ ಅವನ ದೃಷ್ಟಾಂತಗಳಲ್ಲಿ ಸೇರಿದ್ದಾಗಿವೆ. ಆದ್ದರಿಂದ ಸೂರ್ಯನಿಗಾಗಲಿ ಚಂದ್ರನಿಗಾಗಲಿ ನೀವು ಸುಜೂದ್ ಮಾಡಬಾರದು. ಅವುಗಳನ್ನು ಸೃಷ್ಟಿಸಿದ ಅಲ್ಲಾಹನಿಗೆ ಸುಜೂದ್ ಮಾಡಿರಿ, ನೀವು ಅವನನ್ನು ಮಾತ್ರ ಆರಾಧಿಸುವವರಾಗಿದ್ದರೆ." [ಕುರ್‌ಆನ್ 41:37]**

﴿ إِنَّ رَبَّكُمُ اللَّهُ الَّذِي خَلَقَ السَّمَاوَاتِ وَالْأَرْضَ فِي سِتَّةِ أَيَّامٍ ثُمَّ اسْتَوَىٰ عَلَى الْعَرْشِ يُغْشِي اللَّيْلَ النَّهَارَ يَطْلُبُهُ حَثِيثًا وَالشَّمْسَ وَالْقَمَرَ وَالنُّجُومَ مُسَخَّرَاتٍ بِأَمْرِهِ أَلَا لَهُ الْخَلْقُ وَالْأَمْرُ تَبَارَكَ اللَّهُ رَبُّ الْعَالَمِينَ ﴾

**"ಆಕಾಶಗಳನ್ನೂ ಭೂಮಿಯನ್ನೂ ಆರು ದಿನಗಳಲ್ಲಿ (ಹಂತಗಳಲ್ಲಿ) ಸೃಷ್ಟಿಸಿದ ಅಲ್ಲಾಹನೇ ನಿಮ್ಮ ರಬ್ಬ್. ತರುವಾಯ ಅವನು ಸಿಂಹಾಸನದ ಮೇಲೆ ಆರೂಢ ನಾದನು. ರಾತ್ರಿಯನ್ನು ಅವನು ಹಗಲ ಮೇಲೆ ಮುಚ್ಚುತ್ತಾನೆ. ಆಗ ಅದು ಕ್ಷಿಪ್ರಗತಿಯಲ್ಲಿ ಹಗಲನ್ನು ಅರಸುತ್ತಾ ಸಾಗುವುದು. ಸೂರ್ಯ, ಚಂದ್ರ ಮತ್ತು ನಕ್ಷತ್ರಗಳೆಲ್ಲವೂ ಅವನ ಆಜ್ಞೆಗೆ ವಿಧೇಯವಾಗಿವೆ. ಅರಿಯಿರಿ! ಅವನಿಗಾಗಿದೆ ಸೃಷ್ಟಿ ಮತ್ತು ಆಜ್ಞಾಧಿಕಾರ. ಸರ್ವಲೋಕಗಳ ಪರಿಪಾಲಕನಾದ ಅಲ್ಲಾಹು ಅನುಗ್ರಹ ಪೂರ್ಣನಾಗಿದ್ದಾನೆ." [ಕುರ್‌ಆನ್ 7:54]**

ಮತ್ತು ರಬ್ಬ್ ಆರಾಧ್ಯನೂ ಆಗಿದ್ದಾನೆ. ಪುರಾವೆ ಅಲ್ಲಾಹನ ಈ ವಚನ:

﴿ يَا أَيُّهَا النَّاسُ اعْبُدُوا رَبَّكُمُ الَّذِي خَلَقَكُمْ وَالَّذِينَ مِنْ قَبْلِكُمْ لَعَلَّكُمْ تَتَّقُونَ * الَّذِي جَعَلَ لَكُمُ الْأَرْضَ فِرَاشًا وَالسَّمَاءَ بِنَاءً وَأَنْزَلَ مِنَ السَّمَاءِ مَاءً فَأَخْرَجَ بِهِ مِنَ الثَّمَرَاتِ رِزْقًا لَكُمْ فَلَا تَجْعَلُوا لِلَّهِ أَنْدَادًا وَأَنْتُمْ تَعْلَمُونَ ﴾

**“ಓ ಮನುಷ್ಯರೇ, ನೀವು ನಿಮ್ಮನ್ನೂ, ನಿಮ್ಮ ಪೂರ್ವಿಕರನ್ನೂ ಸೃಷ್ಟಿಸಿದ ನಿಮ್ಮ ರಬ್ಬನ್ನು ಆರಾಧಿಸಿರಿ. (ತನ್ಮೂಲಕ) ನೀವು ರಕ್ಷಣೆ ಹೊಂದಲೂಬಹುದು. ಅಂದರೆ ನಿಮಗೆ ಭೂಮಿಯನ್ನು ಒಂದು ಹಾಸನ್ನಾಗಿಯೂ, ಆಕಾಶವನ್ನು ಒಂದು ಚಪ್ಪರವನ್ನಾಗಿಯೂ ನಿರ್ಮಿಸಿಕೊಟ್ಟವನು ಮತ್ತು ಆಕಾಶದಿಂದ ನೀರನ್ನು ಇಳಿಸಿ ತನ್ಮೂಲಕ ಬೆಳೆದ (ವಿವಿಧ) ಫಲವರ್ಗಗಳಿಂದ ನಿಮಗೆ ಆಹಾರಗಳನ್ನು ಹೊರತಂದವನು. ಆದ್ದರಿಂದ (ಇವೆಲ್ಲವನ್ನೂ) ತಿಳಿದೂ ಕೂಡ ನೀವು ಅಲ್ಲಾಹನಿಗೆ ಸರಿಸಮಾನರನ್ನು ನಿಶ್ಚಯಿಸಬೇಡಿರಿ.” [ಕುರ್‌ಆನ್ 2:21–22]**

ಇಬ್ನ್ ಕಸೀರ್(ﷺ) ಹೇಳುತ್ತಾರೆ:

الْخَالِقُ لِهَذِهِ الْأَشْيَاءِ هُوَ الْمُسْتَحِقُّ لِلْعِبَادَةِ.

**“ಈ ವಸ್ತುಗಳ ಸೃಷ್ಟಿಕರ್ತನು ಯಾರೋ ಅವನು ಆರಾಧಿಸಲ್ಪಡಲು ನೈಜ ಅರ್ಹತೆಯುಳ್ಳವನಾಗಿದ್ದಾನೆ.”**

ಇಸ್ಲಾಮ್, ಈಮಾನ್ ಮತ್ತು ಇಹ್ಸಾನ್ ಎಂಬವುಗಳು ಅಲ್ಲಾಹು ಆದೇಶಿಸಿದ ಆರಾಧನೆಯ ವಿವಿಧ ರೂಪಗಳಾಗಿವೆ. ಪ್ರಾರ್ಥನೆ, ಭಯ, ಆಕಾಂಕ್ಷೆ, ಭರವಸೆ, ಆಗ್ರಹ, ಭೀತಿ, ಭಕ್ತಿ, ಭಯಭೀತಿ, ಪಶ್ಚಾತ್ತಾಪ, ಸಹಾಯಯಾಚನೆ, ಅಭಯಯಾಚನೆ, ಸಹಾಯ ಬೇಡುವುದು, ಬಲಿ, ಹರಕೆ ಇತ್ಯಾದಿಗಳೆಲ್ಲವೂ ಅಲ್ಲಾಹು ಆದೇಶಿಸಿದ ಆರಾಧನೆಗಳಲ್ಲಿ ಸೇರಿದ್ದಾಗಿವೆ.

ಪುರಾವೆ ಅಲ್ಲಾಹನ ಈ ವಚನ:

﴿ وَأَنَّ الْمَسَاجِدَ لِلَّهِ فَلَا تَدْعُوا مَعَ اللَّهِ أَحَدًا ﴾

**“ಖಂಡಿತವಾಗಿಯೂ ಮಸೀದಿಗಳು ಅಲ್ಲಾಹನದ್ದಾಗಿವೆ. ಆದ್ದರಿಂದ ಅಲ್ಲಾಹನೊಂದಿಗೆ ಇತರ ಯಾರನ್ನೂ ಪ್ರಾರ್ಥಿಸಬಾರದು.” [ಕುರ್‌ಆನ್ 72:18]**

ಯಾರಾದರೂ ಇದರಿಂದ (ಆರಾಧನೆಗಳಿಂದ) ಸ್ವಲ್ಪವನ್ನಾದರೂ ಅಲ್ಲಾಹೇತರರಿಗೆ ಅರ್ಪಿಸಿದರೆ ಅವನು ಮುಶ್ರಿಕನೂ ಕಾಫಿರನೂ ಆಗುವನು.

ಪುರಾವೆ ಅಲ್ಲಾಹನ ಈ ವಚನ:

﴿ وَمَنْ يَدْعُ مَعَ اللَّهِ إِلَـٰهًا آخَرَ لَا بُرْهَانَ لَهُ بِهِ فَإِنَّمَا حِسَابُهُ عِنْدَ رَبِّهِ إِنَّهُ لَا يُفْلِحُ الْكَافِرُونَ ﴾

**"ಯಾರಾದರೂ ಅಲ್ಲಾಹನೊಂದಿಗೆ ಬೇರೆ ಆರಾಧ್ಯನನ್ನು ಪ್ರಾರ್ಥಿಸಿದರೆ – (ವಾಸ್ತವವಾಗಿ) ಹಾಗೆ ಪ್ರಾರ್ಥಿಸಲು ಅವನಿಗೆ ಯಾವುದೇ ಪುರಾವೆಯೂ ಲಭ್ಯ ವಿಲ್ಲ– ಖಂಡಿತವಾಗಿಯೂ ಅವನ ವಿಚಾರಣೆಯು ಅವನ ರಬ್ಬ್‌ನ ಬಳಿಯಲ್ಲಿದೆ. ಖಂಡಿತವಾಗಿಯೂ ಸತ್ಯನಿಷೇಧಿಗಳು ಎಂದೂ ಯಶಸ್ವಿಯಾಗಲಾರರು." [ಕುರ್‌ಆನ್ 23:117]**

« الدُّعَاءُ مُخُّ الْعِبَادَةِ »

**"ಪ್ರಾರ್ಥನೆಯು ಆರಾಧನೆಯ ತಿರುಳಾಗಿದೆ"** [ಅತ್ತಿರ್ಮಿದಿ]

ಪುರಾವೆ ಅಲ್ಲಾಹನ ಈ ವಚನ:

﴿ وَقَالَ رَبُّكُمُ ادْعُونِي أَسْتَجِبْ لَكُمْ إِنَّ الَّذِينَ يَسْتَكْبِرُونَ عَنْ عِبَادَتِي سَيَدْخُلُونَ جَهَنَّمَ دَاخِرِينَ ﴾

**"ನಿಮ್ಮ ರಬ್ಬ್ ಹೇಳಿದ್ದಾನೆ: ನನ್ನಲ್ಲಿ ಪ್ರಾರ್ಥಿಸಿರಿ ನಾನು ನಿಮಗೆ ಉತ್ತರ ನೀಡುವೆನು. ನನ್ನನ್ನು ಆರಾಧಿಸುವುದರ ಬಗ್ಗೆ ಅಹಂಭಾವಪಡುವವರು ಯಾರೋ ಅವರು ಖಂಡಿತವಾಗಿಯೂ ನಿಂದ್ಯರಾಗಿ ನರಕವನ್ನು ಪ್ರವೇಶಿಸುವರು." [ಕುರ್‌ಆನ್: 40:60]**

'ಭಯ'ದ ಪುರಾವೆ ಅಲ್ಲಾಹನ ಈ ವಚನ:

﴿ فَلَا تَخَافُوهُمْ وَخَافُونِ إِنْ كُنْتُمْ مُؤْمِنِينَ ﴾

**"ಆದ್ದರಿಂದ ಅವರನ್ನು ಭಯಪಡಬೇಡಿ ನನ್ನನ್ನು ಭಯಪಡಿರಿ, ನೀವು ವಿಶ್ವಾಸಿ ಗಳಾಗಿದ್ದರೆ" [ಕುರ್‌ಆನ್: 3:175]**

‘ನಿರೀಕ್ಷೆ’ಯ ಪುರಾವೆ ಅಲ್ಲಾಹನ ಈ ವಚನ:

﴿فَمَنْ كَانَ يَرْجُو لِقَاءَ رَبِّهِ فَلْيَعْمَلْ عَمَلًا صَالِحًا وَلَا يُشْرِكْ بِعِبَادَةِ رَبِّهِ أَحَدًا ﴾

**“ಆದ್ದರಿಂದ ಯಾರಾದರೂ ತನ್ನ ರಬ್ಬ್‌ನ ಭೇಟಿಯನ್ನು ನಿರೀಕ್ಷಿಸುವುದಾದರೆ ಅವನು ಸತ್ಕರ್ಮಗೈಯಲಿ ಮತ್ತು ತನ್ನ ರಬ್ಬ್‌ಗಿರುವ ಆರಾಧನೆಯಲ್ಲಿ ಯಾರನ್ನೂ ಸಹಭಾಗಿಗಳನ್ನಾಗಿ ಮಾಡದಿರಲಿ.” [ಕುರ್‌ಆನ್: 18:110]**

‘ಭರವಸೆ’ಯ ಪುರಾವೆ ಅಲ್ಲಾಹನ ಈ ವಚನ:

﴿ وَعَلَى اللَّهِ فَتَوَكَّلُوا إِنْ كُنْتُمْ مُؤْمِنِينَ ﴾

**“ಮತ್ತು ಅಲ್ಲಾಹನ ಮೇಲೆ ಭರವಸೆಯಿಡಿರಿ, ನೀವು ವಿಶ್ವಾಸಿಗಳಾಗಿದ್ದರೆ.” [ಕುರ್‌ಆನ್: 5:23]**

﴿ وَمَنْ يَتَوَكَّلْ عَلَى اللَّهِ فَهُوَ حَسْبُهُ ﴾

**“ಯಾರಾದರೂ ಅಲ್ಲಾಹನ ಮೇಲೆ ಭರವಸೆಯಿಟ್ಟರೆ ಅವನಿಗೆ ಅವನು (ಅಲ್ಲಾಹು) ಸಾಕು.” [ಕುರ್‌ಆನ್: 65:3]**

‘ಆಸೆ’, ‘ಭೀತಿ’, ಮತ್ತು ‘ಭಕ್ತಿ’ಯ ಪುರಾವೆ ಅಲ್ಲಾಹನ ಈ ವಚನ:

﴿ إِنَّهُمْ كَانُوا يُسَارِعُونَ فِي الْخَيْرَاتِ وَيَدْعُونَنَا رَغَبًا وَرَهَبًا وَكَانُوا لَنَا خَاشِعِينَ ﴾

**“ಖಂಡಿತವಾಗಿಯೂ ಅವರು ಪುಣ್ಯಕಾರ್ಯಗಳಲ್ಲಿ ಪರಸ್ಪರ ಸ್ಪರ್ಧಿಸುತ್ತಿದ್ದರು, ಆಸೆ ಮತ್ತು ಭಯದೊಂದಿಗೆ ನಮ್ಮಲ್ಲಿ ಪ್ರಾರ್ಥಿಸುತ್ತಿದ್ದರು ಮತ್ತು ಅವರು ನಮ್ಮೊಂದಿಗೆ ಭಕ್ತಿಯುಳ್ಳವರಾಗಿದ್ದರು.” [ಕುರ್‌ಆನ್: 21:90]**

‘ಭಯಭೀತಿ’ಯ ಪುರಾವೆ ಅಲ್ಲಾಹನ ಈ ವಚನ:

﴿ فَلَا تَخْشَوْهُمْ وَاخْشَوْنِي ﴾

**“ಆದ್ದರಿಂದ ನೀವು ಅವರನ್ನು ಭಯಪಡಬೇಡಿ ನನ್ನನ್ನು ಭಯಪಡಿರಿ.” [ಕುರ್‌ಆನ್: 2:150]**

‘ಪಶ್ಚಾತ್ತಾಪ’ದ ಪುರಾವೆ ಅಲ್ಲಾಹನ ಈ ವಚನ:

﴿ وَأَنِيبُوا إِلَىٰ رَبِّكُمْ وَأَسْلِمُوا لَهُ ﴾

**“ಮತ್ತು ನಿಮ್ಮ ರಬ್ಬಿನೆಡೆಗೆ ಪಶ್ಚಾತ್ತಾಪದೊಂದಿಗೆ ಮರಳಿರಿ ಮತ್ತು ಅವನಿಗೆ ಶರಣಾಗಿರಿ.” [ಕುರ್‌ಆನ್: 39:54]**

‘ಸಹಾಯಯಾಚನೆ’ಯ ಪುರಾವೆ ಅಲ್ಲಾಹನ ಈ ವಚನ:

﴿ إِيَّاكَ نَعْبُدُ وَإِيَّاكَ نَسْتَعِينُ ﴾

**“ನಾವು ನಿನ್ನನ್ನು ಮಾತ್ರ ಆರಾಧಿಸುತ್ತೇವೆ ಮತ್ತು ನಿನ್ನೊಂದಿಗೆ ಮಾತ್ರ ಸಹಾಯ ಯಾಚಿಸುತ್ತೇವೆ.” [ಕುರ್‌ಆನ್: 1:5]**

ಹದೀಸಿನಲ್ಲಿ:

« إِذَا اسْتَعَنْتَ فَاسْتَعِنْ بِاللَّهِ »

**“ನೀನು ಸಹಾಯ ಯಾಚಿಸುವುದಾದರೆ ಅಲ್ಲಾಹನಲ್ಲಿ ಸಹಾಯಯಾಚಿಸು” [ಅತ್ತಿರ್ಮಿದಿ]**

‘ಅಭಯ ಯಾಚನೆ’ಯ ಪುರಾವೆ ಅಲ್ಲಾಹನ ಈ ವಚನ:

﴿قُلْ أَعُوذُ بِرَبِّ النَّاسِ ﴾

**“ಹೇಳಿರಿ, ನಾನು ಜನರ ರಬ್ಬಿನೊಂದಿಗೆ ಅಭಯ ಯಾಚಿಸುತ್ತಿದ್ದೇನೆ.” [ಕುರ್‌ಆನ್: 114:1]**

‘ಸಹಾಯ ಬೇಡು’ವುದರ ಪುರಾವೆ ಅಲ್ಲಾಹನ ಈ ವಚನ:

﴿إِذْ تَسْتَغِيثُونَ رَبَّكُمْ فَاسْتَجَابَ لَكُمْ ﴾

“ನೀವು ನಿಮ್ಮ ರಬ್ಬಿನೊಂದಿಗೆ ಸಹಾಯ ಬೇಡಿದಾಗ ಅವನು ನಿಮಗೆ ಉತ್ತರ ನೀಡಿದ ಸಂದರ್ಭ (ವನ್ನು ಸ್ಮರಿಸಿರಿ).” [ಕುರ್‌ಆನ್: 8:9]

‘ಬಲಿ’ಯ ಪುರಾವೆ ಅಲ್ಲಾಹನ ಈ ವಚನ:

﴿ قُلْ إِنَّ صَلَاتِي وَنُسُكِي وَمَحْيَايَ وَمَمَاتِي لِلَّهِ رَبِّ الْعَالَمِينَ * لَا شَرِيكَ لَهُ وَبِذَلِكَ أُمِرْتُ وَأَنَا أَوَّلُ الْمُسْلِمِينَ ﴾

“ಹೇಳಿರಿ: ಖಂಡಿತವಾಗಿಯೂ ನನ್ನ ನಮಾಝ್, ನನ್ನ ಬಲಿ, ನನ್ನ ಜೀವನ ಮತ್ತು ನನ್ನ ಮರಣ ಎಲ್ಲವೂ ಸರ್ವಲೋಕಗಳ ರಬ್ಬ್ ಆಗಿರುವ ಅಲ್ಲಾಹನಿಗಾಗಿವೆ. ಅವನಿಗೆ ಯಾವುದೇ ಸಹಭಾಗಿಗಳಿಲ್ಲ. ನನಗೆ ಆಜ್ಞಾಪಿಸಲಾಗಿರುವುದು ಇದನ್ನೇ ಆಗಿದೆ ಮತ್ತು (ಅಲ್ಲಾಹನಿಗೆ) ಶರಣಾದವರಲ್ಲಿ ನಾನು ಮೊದಲಿಗನಾಗಿದ್ದೇನೆ.” [ಕುರ್‌ಆನ್: 6:162–163]

ಸುನ್ನತ್‌ನಲ್ಲಿ:

« لَعَنَ اللَّهُ مَنْ ذَبَحَ لِغَيْرِ اللَّهِ »

“ಅಲ್ಲಾಹೇತರರಿಗೆ ಬಲಿಯರ್ಪಿಸುವವನನ್ನು ಅಲ್ಲಾಹು ಶಪಿಸಿದ್ದಾನೆ.” [ಮುಸ್ಲಿಮ್]

‘ಹರಕೆ’ಯ ಪುರಾವೆ ಅಲ್ಲಾಹನ ಈ ವಚನ:

﴿ يُوفُونَ بِالنَّذْرِ وَيَخَافُونَ يَوْمًا كَانَ شَرُّهُ مُسْتَطِيرًا ﴾

“ಅವರು ಹರಕೆಗಳನ್ನು ಸಂದಾಯ ಮಾಡುವರು ಮತ್ತು ಕೆಡುಕುಗಳು ವಿಶಾಲವಾಗಿ ಹರಡಿರುವ ದಿನವನ್ನು ಅವರು ಭಯಪಡುವರು.” [ಕುರ್‌ಆನ್: 76:7]

# الْأَصْلُ الثَّانِي: مَعْرِفَةُ دِينِ الْإِسْلَامِ بِالْأَدِلَّةِ

# ಎರಡನೆಯ ನಿಯಮ: ಇಸ್ಲಾಮ್ ಧರ್ಮವನ್ನು ಪುರಾವೆಸಹಿತ ಅರಿಯುವುದು

ಅಂದರೆ ಆರಾಧನೆಯನ್ನು ಅಲ್ಲಾಹನಿಗೆ ಮಾತ್ರ ಅರ್ಪಿಸುವ ಮೂಲಕ ಅವನಿಗೆ ಸಂಪೂರ್ಣ ಶರಣಾಗುವುದು, ಅನುಸರಣೆಯೊಂದಿಗೆ ಅವನಿಗೆ ವಿಧೇಯವಾಗಿರುವುದು ಮತ್ತು ಶಿರ್ಕ್‌ನಿಂದ ಮತ್ತು ಅದರ ಜನರಿಂದ ದೂರವಾಗುವುದು.

ಇದರಲ್ಲಿ ಮೂರು ಹಂತಗಳಿವೆ:

1. ಇಸ್ಲಾಮ್
2. ಈಮಾನ್
3. ಇಹ್ಸಾನ್

**ಮೊದಲನೆಯ ಹಂತ: ಇಸ್ಲಾಮ್**

ಇಸ್ಲಾಮಿನ ಸ್ಥಂಭಗಳು ಐದು:

1. ಅಲ್ಲಾಹನ ಹೊರತು ಆರಾಧನೆಗೆ ನೈಜ ಹಕ್ಕುದಾರರಾಗಿ ಅನ್ಯರಿಲ್ಲ ಮತ್ತು ಮುಹಮ್ಮದ್(ﷺ) ಅಲ್ಲಾಹನ ಸಂದೇಶವಾಹಕರಾಗಿದ್ದಾರೆ ಎಂಬ ಸಾಕ್ಷ್ಯವಚನ.
2. ನಮಾಝ್‌ನ ಸಂಸ್ಥಾಪನೆ.
3. ಝಕಾತ್ ನೀಡುವುದು.
4. ರಮದಾನ್ ತಿಂಗಳ ಉಪವಾಸ
5. ಅಲ್ಲಾಹನ ಭವನದ ಹಜ್ಜ್

'ಸಾಕ್ಷ್ಯವಚನ'ದ ಪುರಾವೆ ಅಲ್ಲಾಹನ ಈ ವಚನವಾಗಿದೆ:

﴿ شَهِدَ اللَّهُ أَنَّهُ لَا إِلَـٰهَ إِلَّا هُوَ وَالْمَلَائِكَةُ وَأُولُو الْعِلْمِ قَائِمًا بِالْقِسْطِ لَا إِلَـٰهَ إِلَّا هُوَ الْعَزِيزُ الْحَكِيمُ ﴾

**"ತನ್ನ ಹೊರತು ಅನ್ಯ ಆರಾಧ್ಯರಿಲ್ಲವೆಂದು ಅಲ್ಲಾಹು ಸಾಕ್ಷ್ಯವಹಿಸಿರುವನು. ಮಲಕ್‌ಗಳೂ ಜ್ಞಾನವುಳ್ಳವರೂ (ಅದಕ್ಕೆ ಸಾಕ್ಷಿಗಳಾಗಿರುವರು). ಅವನು ನ್ಯಾಯ ಪಾಲಿಸುವವನಾಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಪ್ರತಾಪಶಾಲಿಯೂ, ಯುಕ್ತಿಪೂರ್ಣನೂ ಆಗಿರುವನು." [ಕುರ್‌ಆನ್: 3:18]**

ಇದರರ್ಥ:

'ಲಾ ಇಲಾಹ ಇಲ್ಲಲ್ಲಾಹ್' ಎಂದರೆ ಆರಾಧನೆಗೆ ನೈಜ ಹಕ್ಕುದಾರನು ಅಲ್ಲಾಹು ಮಾತ್ರವಾಗಿದ್ದಾನೆ, ಅವನ ಹೊರತು ಯಾರೂ ಅದಕ್ಕೆ ಅರ್ಹರಲ್ಲ ಎಂದಾಗಿದೆ. ಇದರ ಆರಂಭದಲ್ಲಿ ಬರುವ 'ಲಾ ಇಲಾಹ' ಎಂಬ ವಚನವು ಅಲ್ಲಾಹನ ಹೊರತು ಆರಾಧಿಸಲಾಗುವ ಸರ್ವವನ್ನೂ ತಿರಸ್ಕರಿಸುತ್ತದೆ. ಕೊನೆಯಲ್ಲಿ ಬರುವ 'ಇಲ್ಲಲ್ಲಾಹ್' ಎಂಬ ವಚನವು ಆರಾಧನೆಯು ಅಲ್ಲಾಹನಿಗೆ ಮಾತ್ರವಾಗಿದೆ ಮತ್ತು ಯಾವ ರೀತಿ ಅವನಿಗೆ ಅವನ ಆಧಿಪತ್ಯದಲ್ಲಿ ಯಾವುದೇ ಸಹಭಾಗಿಗಳಿಲ್ಲವೋ ಹಾಗೆಯೇ ಆರಾಧನೆಯಲ್ಲಿ ಕೂಡ ಅವನಿಗೆ ಯಾವುದೇ ಸಹಭಾಗಿಗಳೂ ಇಲ್ಲ ಎಂಬುದನ್ನು ಸ್ಥಾಪಿಸುತ್ತದೆ.

ಇದನ್ನು ಸ್ಪಷ್ಟಪಡಿಸುವ ವ್ಯಾಖ್ಯಾನವು ಅಲ್ಲಾಹನ ಈ ವಚನದಲ್ಲಿದೆ:

﴿ وَإِذْ قَالَ إِبْرَاهِيمُ لِأَبِيهِ وَقَوْمِهِ إِنَّنِي بَرَاءٌ مِمَّا تَعْبُدُونَ * إِلَّا الَّذِي فَطَرَنِي فَإِنَّهُ سَيَهْدِينِ * وَجَعَلَهَا كَلِمَةً بَاقِيَةً فِي عَقِبِهِ لَعَلَّهُمْ يَرْجِعُونَ ﴾

**"ಇಬ್ರಾಹೀಮ್ ತಮ್ಮ ತಂದೆಯೊಂದಿಗೆ ಮತ್ತು ಜನತೆಯೊಂದಿಗೆ ಹೇಳಿದ ಸಂದರ್ಭ. 'ಖಂಡಿತವಾಗಿಯೂ ನೀವು ಆರಾಧಿಸುತ್ತಿರುವವುಗಳಿಂದ ನಾನು ವಿಮುಕ್ತನಾಗಿರುವೆನು. ನನ್ನನ್ನು ಸೃಷ್ಟಿಸಿದವನ ಹೊರತು. ಯಾಕೆಂದರೆ ಖಂಡಿತ**

ವಾಗಿಯೂ ಅವನು ನನಗೆ ಮಾರ್ಗದರ್ಶನ ಮಾಡುವನು'. ಅವರ ನಂತರದವರು (ಸತ್ಯದೆಡೆಗೆ) ಮರಳುವುದಕ್ಕಾಗಿ ಅವರು ಅದನ್ನು (ಆ ಘೋಷಣೆಯನ್ನು) ಅವರ ಮಧ್ಯೆ ನೆಲೆನಿಲ್ಲುವ ಒಂದು ವಚನವನ್ನಾಗಿ ಮಾಡಿದರು." [ಕುರ್‌ಆನ್: **43:26–28**]

﴿قُلْ يَا أَهْلَ الْكِتَابِ تَعَالَوْا إِلَىٰ كَلِمَةٍ سَوَاءٍ بَيْنَنَا وَبَيْنَكُمْ أَلَّا نَعْبُدَ إِلَّا اللَّهَ وَلَا نُشْرِكَ بِهِ شَيْئًا وَلَا يَتَّخِذَ بَعْضُنَا بَعْضًا أَرْبَابًا مِنْ دُونِ اللَّهِ فَإِنْ تَوَلَّوْا فَقُولُوا اشْهَدُوا بِأَنَّا مُسْلِمُونَ﴾

"(ಓ ಪ್ರವಾದಿಯವರೇ!) ಹೇಳಿರಿ: 'ಓ ಗ್ರಂಥದವರೇ! ನಮ್ಮ ಮತ್ತು ನಿಮ್ಮ ನಡುವೆ ಸಮಾನವಾಗಿರುವ ಒಂದು ವಚನದೆಡೆಗೆ ಬನ್ನಿರಿ. ಅಂದರೆ ನಾವು ಅಲ್ಲಾಹುವಿನ ಹೊರತು (ಇನ್ನಾರನ್ನೂ) ಆರಾಧಿಸದಿರೋಣ, ಅವನೊಂದಿಗೆ ಯಾರನ್ನೂ ಸಹಭಾಗಿಯನ್ನಾಗಿ ಮಾಡದಿರೋಣ ಮತ್ತು ನಮ್ಮಲ್ಲಿ ಕೆಲವರು ಕೆಲವರನ್ನು ಅಲ್ಲಾಹುವಿನ ಹೊರತಾಗಿರುವ ರಬ್ಬ್‌ಗಳನ್ನಾಗಿ ಮಾಡದಿರೋಣ'. ತರುವಾಯ ಅವರೇನಾದರೂ ವಿಮುಖರಾಗುವುದಾದರೆ 'ನಾವು (ಅಲ್ಲಾಹುವಿಗೆ) ಶರಣಾಗತರಾಗಿರುವೆವು ಎಂಬುದಕ್ಕೆ ನೀವು ಸಾಕ್ಷ್ಯವಹಿಸಿರಿ' ಎಂದು ಅವರೊಂದಿಗೆ ಹೇಳಿರಿ." [ಕುರ್‌ಆನ್: **3:64**]

ಮುಹಮ್ಮದ್(ﷺ)ರವರು ಅಲ್ಲಾಹನ ಸಂದೇಶವಾಹಕರಾಗಿದ್ದಾರೆ ಎಂಬುದರ ಪುರಾವೆ ಅಲ್ಲಾಹನ ಈ ವಚನ:

﴿ لَقَدْ جَاءَكُمْ رَسُولٌ مِنْ أَنْفُسِكُمْ عَزِيزٌ عَلَيْهِ مَا عَنِتُّمْ حَرِيصٌ عَلَيْكُمْ بِالْمُؤْمِنِينَ رَءُوفٌ رَحِيمٌ ﴾

"ಖಂಡಿತವಾಗಿಯೂ ನಿಮಗೆ ನಿಮ್ಮಿಂದಲೇ ಒಬ್ಬ ಸಂದೇಶವಾಹಕರು ಬಂದಿರುವರು. ನೀವು ಕಷ್ಟಪಡುವುದು ಅವರಿಗೆ ಸಹಿಸಲಾಗದು, ಅವರು ನಿಮ್ಮ

**ಬಗ್ಗೆ ಅತ್ಯಾಸಕ್ತಿಯುಳ್ಳವರಾಗಿರುವರು ಮತ್ತು ಸತ್ಯವಿಶ್ವಾಸಿಗಳೊಂದಿಗೆ ಅಪಾರ ದಯೆಯುಳ್ಳವರೂ, ಕರುಣೆಯುಳ್ಳವರೂ ಆಗಿರುವರು." [ಕುರ್‌ಆನ್ 9:128]**

ಮುಹಮ್ಮದ್(ﷺ)ರವರು ಅಲ್ಲಾಹನ ಸಂದೇಶವಾಹಕರಾಗಿದ್ದಾರೆ ಎಂಬ ಸಾಕ್ಷ್ಯ ವಚನದ ಅರ್ಥವು ಅವರು ಆಜ್ಞಾಪಿಸಿರುವುದರಲ್ಲಿ ಅವರ ಆಜ್ಞಾಪಾಲನೆ ಮಾಡುವುದು, ಅವರ ಮಾತುಗಳನ್ನು ಸತ್ಯವೆಂದು ನಂಬುವುದು, ಅವರು ವಿರೋಧಿಸಿದ ಮತ್ತು ತಡೆದ ವಿಷಯಗಳಿಂದ ದೂರವಿರುವುದು ಮತ್ತು ಅವರು ತಂದ ಶರೀಅತ್ತಿನ ಪ್ರಕಾರವಲ್ಲದೆ ಅಲ್ಲಾಹನನ್ನು ಆರಾಧಿಸದಿರುವುದು.

ನಮಾಝ್ ಮತ್ತು ಝಕಾತ್‌ನ ಪುರಾವೆ ಅಲ್ಲಾಹನ ಈ ವಚನವಾಗಿದೆ:

﴿ وَمَا أُمِرُوا إِلَّا لِيَعْبُدُوا اللَّهَ مُخْلِصِينَ لَهُ الدِّينَ حُنَفَاءَ وَيُقِيمُوا الصَّلَاةَ وَيُؤْتُوا الزَّكَاةَ وَذَلِكَ دِينُ الْقَيِّمَةِ ﴾

**"ಶರಣಾಗತಿಯನ್ನು ಅಲ್ಲಾಹುವಿಗೆ ಮಾತ್ರ ಸಮರ್ಪಿಸಿ, ಋಜುಮನಸ್ಕರಾಗಿರುತ್ತಾ ಅವನನ್ನು ಆರಾಧಿಸಲು, ನಮಾಝ್ ಸಂಸ್ಥಾಪಿಸಲು ಮತ್ತು ಝಕಾತ್ ನೀಡಲು ಹೊರತು ಅವರೊಂದಿಗೆ ಇನ್ನೇನೂ ಆದೇಶಿಸಲಾಗಿಲ್ಲ. ನೇರವಾದ ಧರ್ಮವು ಅದೇ ಆಗಿದೆ." [ಕುರ್‌ಆನ್ 98:5]**

ಉಪವಾಸದ ಪುರಾವೆ ಅಲ್ಲಾಹನ ಈ ವಚನವಾಗಿದೆ:

﴿ يَا أَيُّهَا الَّذِينَ آمَنُوا كُتِبَ عَلَيْكُمُ الصِّيَامُ كَمَا كُتِبَ عَلَى الَّذِينَ مِنْ قَبْلِكُمْ لَعَلَّكُمْ تَتَّقُونَ ﴾

**"ಓ ವಿಶ್ವಾಸಿಗಳೇ, ನಿಮಗಿಂತ ಮುಂಚಿನವರ ಮೇಲೆ ವಿಧಿಸಲಾದಂತೆ ನಿಮ್ಮ ಮೇಲೂ ಉಪವಾಸ ಆಚರಿಸುವುದನ್ನು ಕಡ್ಡಾಯವಾಗಿ ವಿಧಿಸಲಾಗಿದೆ. ನೀವು ಭಯಭಕ್ತಿ ಪಾಲಿಸುವ ಸಲುವಾಗಿ." [ಕುರ್‌ಆನ್: 2:183]**

ಹಜ್ಜ್‌ನ ಪುರಾವೆ ಅಲ್ಲಾಹನ ಈ ವಚನವಾಗಿದೆ:

﴿وَلِلَّهِ عَلَى النَّاسِ حِجُّ الْبَيْتِ مَنِ اسْتَطَاعَ إِلَيْهِ سَبِيلًا ۚ وَمَنْ كَفَرَ فَإِنَّ اللَّهَ غَنِيٌّ عَنِ الْعَالَمِينَ﴾

**"ಆ ಭವನವನ್ನು ತಲುಪಲು ಸಾಧ್ಯವಿರುವ ಜನರು ಅದರೆಡೆಗೆ ಹಜ್ಜ್‌ಯಾತ್ರೆ ಮಾಡುವುದು ಅವರಿಗೆ ಅಲ್ಲಾಹುವಿನೊಂದಿಗಿರುವ ಬಾಧ್ಯತೆಯಾಗಿದೆ. ಯಾರಾದರೂ ಅವಿಶ್ವಾಸವಿಡುವುದಾದರೆ ಖಂಡಿತವಾಗಿಯೂ ಅಲ್ಲಾಹು ಸರ್ವಲೋಕದವರಿಂದ ನಿರಪೇಕ್ಷನಾಗಿರುವನು." [ಕುರ್‌ಆನ್: 3:97]**

**ಎರಡನೆ ಹಂತ: ಈಮಾನ್**

ಇದಕ್ಕೆ ಎಪ್ಪತ್ತಕ್ಕಿಂತಲೂ ಅಧಿಕ ಶಾಖೆಗಳಿವೆ. ಅವುಗಳಲ್ಲಿ ಶ್ರೇಷ್ಠವಾದುದು 'ಲಾ ಇಲಾಹ ಇಲ್ಲಲ್ಲಾಹ್' ಎಂಬ ವಚನ. ಅತ್ಯಂತ ಕೆಳಗಿನದ್ದು ದಾರಿಯಿಂದ ಅಡೆತಡೆಗಳನ್ನು ನಿವಾರಿಸುವುದು. ನಾಚಿಕೆ ಕೂಡ ಈಮಾನಿನ ಒಂದು ಶಾಖೆಯಾಗಿದೆ.

ಈಮಾನಿನ ಸ್ಥಂಭಗಳು ಆರು:

1. ಅಲ್ಲಾಹನಲ್ಲಿ ವಿಶ್ವಾಸವಿಡುವುದು
2. ಅವನ ಮಲಕ್‌ಗಳಲ್ಲಿ ವಿಶ್ವಾಸವಿಡುವುದು
3. ಅವನ ಗ್ರಂಥಗಳಲ್ಲಿ ವಿಶ್ವಾಸವಿಡುವುದು
4. ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಡುವುದು
5. ಅಂತ್ಯದಿನದಲ್ಲಿ ವಿಶ್ವಾಸವಿಡುವುದು
6. ವಿಧಿಯಲ್ಲಿ, ಅದರ ಒಳಿತು ಮತ್ತು ಕೆಡುಕುಗಳಲ್ಲಿ ವಿಶ್ವಾಸವಿಡುವುದು

ಈ ಆರು ಸ್ಥಂಭಗಳ ಪುರಾವೆ ಅಲ್ಲಾಹನ ಈ ವಚನಗಳಾಗಿವೆ:

﴿ لَيْسَ الْبِرَّ أَنْ تُوَلُّوا وُجُوهَكُمْ قِبَلَ الْمَشْرِقِ وَالْمَغْرِبِ وَلَـٰكِنَّ الْبِرَّ مَنْ آمَنَ بِـاللَّهِ وَالْيَوْمِ الْآخِرِ وَالْمَلَائِكَةِ وَالْكِتَابِ وَالنَّبِيِّينَ ﴾

**"ನೀವು ನಿಮ್ಮ ಮುಖಗಳನ್ನು ಪೂರ್ವದೆಡೆಗೆ ಅಥವಾ ಪಶ್ಚಿಮದೆಡೆಗೆ ತಿರುಗಿಸುವುದಲ್ಲ ಪುಣ್ಯ. ಆದರೆ ಅಲ್ಲಾಹುವಿನಲ್ಲಿ, ಅಂತ್ಯದಿನದಲ್ಲಿ, ಮಲಕ್‌ಗಳಲ್ಲಿ, ಗ್ರಂಥದಲ್ಲಿ ಮತ್ತು ಪ್ರವಾದಿಗಳಲ್ಲಿ ವಿಶ್ವಾಸವಿಡುವವನು... ಯಾರೋ ಅವರೇ ಪುಣ್ಯವಂತರು." [ಕುರ್‌ಆನ್: 2:177]**

﴿ إِنَّا كُلَّ شَيْءٍ خَلَقْنَاهُ بِقَدَرٍ ﴾

**"ಖಂಡಿತವಾಗಿಯೂ ಪ್ರತಿಯೊಂದು ವಸ್ತುವನ್ನೂ ನಾವು ಒಂದು ನಿರ್ಣಯದ ಪ್ರಕಾರ ಸೃಷ್ಟಿಸಿರುವೆವು." [ಕುರ್‌ಆನ್: 54:49]**

**ಮೂರನೆ ಹಂತ: ಇಹ್ಸಾನ್**

ಇದಕ್ಕಿರುವುದು ಒಂದೇ ಒಂದು ಸ್ಥಂಭ. ಅದು:

أَنْ تَعْبُدَ اللَّهَ كَأَنَّكَ تَرَاهُ فَإِنْ لَمْ تَرَاهُ فَإِنَّهُ يَرَاكَ

**"ನೀನು ಅಲ್ಲಾಹನನ್ನು ಕಾಣುತ್ತಿರುವಂತೆ ಅವನನ್ನು ನೀನು ಆರಾಧಿಸುವುದು. ನೀನು ಅವನನ್ನು ಕಾಣದಿದ್ದರೂ ಅವನು ನಿನ್ನನ್ನು ಕಾಣುತ್ತಿರುವನು."**

ಇದರ ಪುರಾವೆ ಅಲ್ಲಾಹನ ಈ ವಚನವಾಗಿದೆ:

﴿ إِنَّ اللَّهَ مَعَ الَّذِينَ اتَّقَوْا وَالَّذِينَ هُمْ مُحْسِنُونَ ﴾

**"ಖಂಡಿತವಾಗಿಯೂ ಅಲ್ಲಾಹು ಭಯಭಕ್ತಿ ಪಾಲಿಸಿದವರ ಮತ್ತು ಮುಹ್ಸಿನ್‌ಗಳಾಗಿ ರುವವರ (ಇಹ್ಸಾನ್‌ನೊಂದಿಗಿರುವವರ) ಜೊತೆಗಿರುವನು." [ಕುರ್‌ಆನ್: 16:128]**

﴿ وَتَوَكَّلْ عَلَى الْعَزِيزِ الرَّحِيمِ * الَّذِي يَرَاكَ حِينَ تَقُومُ * وَتَقَلُّبَكَ فِي السَّاجِدِينَ * إِنَّهُ هُوَ السَّمِيعُ الْعَلِيمُ ﴾

“ಪ್ರತಾಪಶಾಲಿಯೂ ಕರುಣಾನಿಧಿಯೂ ಆಗಿರುವವನ ಮೇಲೆ ಭರವಸೆಯಿಡಿರಿ. ತಾವು ನಿಂತು ನಮಾಝ್ ಮಾಡುವಾಗ ಅವನು ತಮ್ಮನ್ನು ವೀಕ್ಷಿಸುತ್ತಿರುವನು. ಸಾಷ್ಟಾಂಗ ಮಾಡುವವರೊಂದಿಗಿರುವ ತಮ್ಮ ಚಲನವಲನಗಳನ್ನೂ (ಅವನು ವೀಕ್ಷಿಸುತ್ತಿರುವನು). ಖಂಡಿತವಾಗಿಯೂ ಅವನು ಎಲ್ಲವನ್ನು ಆಲಿಸುವವನೂ ಅರಿಯುವವನೂ ಆಗಿರುವನು.” [ಕುರ್‌ಆನ್: 26:217–220]

﴿ وَمَا تَكُونُ فِي شَأْنٍ وَمَا تَتْلُو مِنْهُ مِنْ قُرْآنٍ وَلَا تَعْمَلُونَ مِنْ عَمَلٍ إِلَّا كُنَّا عَلَيْكُمْ شُهُودًا إِذْ تُفِيضُونَ فِيهِ ﴾

“(ಓ ಪ್ರವಾದಿಯವರೇ!) ತಾವು ಯಾವುದೇ ಕಾರ್ಯದಲ್ಲಿ ಮಗ್ನರಾಗಿರುವಾಗ, ಅದರ ಬಗ್ಗೆ ಕುರ್‌ಆನ್‌ನಿಂದ ಏನನ್ನಾದರೂ ಓದಿಕೊಡುತ್ತಿರುವಾಗ ಮತ್ತು ನೀವು ಯಾವುದೇ ಕರ್ಮವನ್ನು ಮಾಡುತ್ತಿರುವಾಗ, ನೀವು ಅದರಲ್ಲಿ ಮಗ್ನರಾಗಿರುವಾಗ ನಾವು ನಿಮ್ಮ ಮೇಲೆ ಸಾಕ್ಷಿಯಾಗಿರದೆ ಇರಲಾರೆವು.” [ಕುರ್‌ಆನ್: 10:61]

ಸುನ್ನತ್‌ನಲ್ಲಿರುವ ಪುರಾವೆ– ಪ್ರಸಿದ್ಧವಾಗಿರುವ ಹದೀಸ್ ಜಿಬ್ರೀಲ್:

عَنْ عُمَرَ بْنِ الْخَطَّابِ رَضِيَ اللَّهُ عَنْهُ قَالَ: بَيْنَا نَحْنُ جُلُوسٌ عِنْدَ النَّبِيِّ صَلَّى اللَّهُ عَلَيْهِ وَسَلَّمَ إِذْ طَلَعَ عَلَيْنَا رَجُلٌ شَدِيدُ بَيَاضِ الثِّيَابِ شَدِيدُ سَوَادِ الشَّعَرِ لَا يُرَى عَلَيْهِ أَثَرُ السَّفَرِ وَلَا يَعْرِفُهُ مِنَّا أَحَدٌ، فَجَلَسَ إِلَى النَّبِيِّ صَلَّى اللَّهُ عَلَيْهِ وَسَلَّمَ فَأَسْنَدَ رُكْبَتَيْهِ إِلَى رُكْبَتَيْهِ وَوَضَعَ كَفَّيْهِ عَلَى فَخِذَيْهِ وَقَالَ: يَا مُحَمَّدُ أَخْبِرْنِي عَنِ الْإِسْلَامِ، فَقَالَ: «أَنْ تَشْهَدَ أَنْ لَا إِلَهَ إِلاَّ اللهُ وَأَنَّ مُحَمَّدًا رَسُولُ اللهِ وَتُقِيمَ الصَّلَاةَ وَتُؤْتِيَ الزَّكَاةَ وَتَصُومَ رَمَضَانَ وَتَحُجَّ الْبَيْتَ إِنِ اسْتَطَعْتَ إِلَيْهِ سَبِيلًا» قَالَ: صَدَقْتَ، فَعَجِبْنَا لَهُ يَسْأَلُهُ وَيُصَدِّقُهُ، قَالَ: فَأَخْبِرْنِي عَنِ الْإِيمَانِ، قَالَ: «أَنْ تُؤْمِنَ بِاللهِ وَمَلَائِكَتِهِ وَكُتُبِهِ وَرُسُلِهِ وَالْيَوْمِ الآخِرِ وَبِالْقَدْرِ خَيْرِهِ وَشَرِّهِ» قَالَ: أَخْبِرْنِي عَنِ الْإِحْسَانِ، قَالَ: «أَنْ تَعْبُدَ اللهَ كَأَنَّكَ تَرَاهُ فَإِنْ لَمْ تَكُنْ تَرَاهُ فَإِنَّهُ يَرَاكَ» قَالَ: أَخْبِرْنِي عَنِ السَّاعَةِ، قَالَ:

«مَا الْمَسْؤُولُ عَنْهَا بِأَعْلَمَ مِنَ السَّائِلِ» قَالَ: أَخْبِرْنِي عَنْ أَمَارَاتِهَا، قَالَ: «أَنْ تَلِدَ الْأَمَةُ رَبَّتَهَا وَأَنْ تَرَى الْحُفَاةَ الْعُرَاةَ الْعَالَةَ رِعَاءَ الشَّاءِ يَتَطَاوَلُونَ فِي الْبُنْيَانِ» قَالَ: فَمَضَى فَلَبِثْنَا مَلِيًّا، فَقَالَ: «يَا عُمَرُ أَتَدْرِي مَنِ السَّائِلُ؟» قُلْتُ: اللهُ وَرَسُولُهُ أَعْلَمُ، قَالَ: «هَذَا جِبْرِيلُ أَتَاكُمْ يُعَلِّمُكُمْ دِينَكُمْ»

"ಉಮರ್(ﷺ)ರಿಂದ ವರದಿ: ನಾವೊಮ್ಮೆ ಪ್ರವಾದಿ(ﷺ)ರವರೊಂದಿಗೆ ಕುಳಿತಿರುವಾಗ ಕಡುಬಿಳಿ ಬಣ್ಣದ ಉಡುಪು ಧರಿಸಿದ, ಕಡುಗಪ್ಪು ಬಣ್ಣದ ಕೂದಲಿನ ವ್ಯಕ್ತಿಯೊಬ್ಬರು ಪ್ರತ್ಯಕ್ಷರಾದರು. ಪ್ರಯಾಣದ ಯಾವುದೇ ಕುರುಹೂ ಅವರಲ್ಲಿ ಗೋಚರಿಸುತ್ತಿರಲಿಲ್ಲ ಮತ್ತು ನಮ್ಮಲ್ಲಿ ಯಾರಿಗೂ ಅವರ ಪರಿಚಯವಿರಲಿಲ್ಲ. ಆ ವ್ಯಕ್ತಿಯು ತಮ್ಮ ಮೊಣಕಾಲನ್ನು ಪ್ರವಾದಿ(ﷺ)ರವರ ಮೊಣಕಾಲಿಗೆ ಜೋಡಿಸಿ ಕುಳಿತು ತಮ್ಮ ಅಂಗೈ ಗಳನ್ನು ಪ್ರವಾದಿ(ﷺ)ರವರ ತೊಡೆಗಳ ಮೇಲಿಟ್ಟು ಕೇಳಿದರು:

"ಓ ಮುಹಮ್ಮದ್, ನನಗೆ ಇಸ್ಲಾಮಿನ ಬಗ್ಗೆ ತಿಳಿಸಿರಿ."

ಪ್ರವಾದಿ(ﷺ)ರವರು ಹೇಳಿದರು: "ಅಲ್ಲಾಹನ ಹೊರತು ಆರಾಧನೆಗೆ ನೈಜ ಹಕ್ಕನ್ನು ಹೊಂದಿದವರಾಗಿ ಅನ್ಯರಿಲ್ಲ ಮತ್ತು ಮುಹಮ್ಮದ್(ﷺ) ಅಲ್ಲಾಹನ ಸಂದೇಶ ವಾಹಕರಾಗಿದ್ದಾರೆ ಎಂದು ಸಾಕ್ಷಿವಹಿಸುವುದು, ನಮಾಝನ್ನು ಸಂಸ್ಥಾಪಿಸುವುದು, ಝಕಾತ್ ನೀಡುವುದು, ರಮದಾನ್ ತಿಂಗಳಲ್ಲಿ ಉಪವಾಸ ಆಚರಿಸುವುದು ಮತ್ತು ತಲುಪಲು ಸಾಧ್ಯವಿದ್ದರೆ ಅಲ್ಲಾಹನ ಭವನಕ್ಕೆ ಹಜ್ಜ್ ನಿರ್ವಹಿಸುವುದು."

ಆ ವ್ಯಕ್ತಿ ಹೇಳಿದರು: "ತಾವು ಹೇಳಿದ್ದು ಸತ್ಯವಾಗಿದೆ."

ಆ ವ್ಯಕ್ತಿ ಪ್ರಶ್ನಿಸುವುದು ಮತ್ತು ಸತ್ಯವೆಂದು ದೃಢೀಕರಿಸುವುದು ನಮಗೆ ತುಂಬಾ ಅಚ್ಚರಿಯನ್ನುಂಟುಮಾಡಿತು.

ಆ ವ್ಯಕ್ತಿ ಕೇಳಿದರು: "ಈಮಾನ್‌ನ ಬಗ್ಗೆ ನನಗೆ ತಿಳಿಸಿಕೊಡಿರಿ."

ಪ್ರವಾದಿ(ﷺ)ರವರು ಹೇಳಿದರು: “ಅಲ್ಲಾಹನಲ್ಲಿ, ಅವನ ಮಲಕ್‌ಗಳಲ್ಲಿ, ಅವನ ಗ್ರಂಥಗಳಲ್ಲಿ, ಅವನ ಸಂದೇಶವಾಹಕರಲ್ಲಿ, ಅಂತ್ಯದಿನದಲ್ಲಿ ಮತ್ತು ವಿಧಿಯಲ್ಲಿ – ಅದರ ಒಳಿತು ಮತ್ತು ಕೆಡುಕುಗಳಲ್ಲಿ– ವಿಶ್ವಾಸವಿಡುವುದು.”

ಆ ವ್ಯಕ್ತಿ ಕೇಳಿದರು: “ಇಹ್ಸಾನ್‌ನ ಬಗ್ಗೆ ನನಗೆ ತಿಳಿಸಿಕೊಡಿರಿ.”

ಪ್ರವಾದಿ(ﷺ)ರವರು ಹೇಳಿದರು: “ಅಲ್ಲಾಹನನ್ನು ನೀನು ನೋಡುತ್ತಿರುವಂತೆ ಅವನನ್ನು ನೀನು ಆರಾಧಿಸುವುದು, ಅವನನ್ನು ನೀನು ಕಾಣದಿದ್ದರೂ ಅವನು ನಿನ್ನನ್ನು ಕಾಣುತ್ತಿರುವನು.”

ಆ ವ್ಯಕ್ತಿ ಕೇಳಿದರು: “ಅಂತ್ಯದಿನದ ಬಗ್ಗೆ ನನಗೆ ತಿಳಿಸಿಕೊಡಿರಿ.”

ಪ್ರವಾದಿ(ﷺ)ರವರು ಹೇಳಿದರು: “ಅದರ ಬಗ್ಗೆ ಕೇಳುವವನಿಗಿಂತಲೂ ಹೆಚ್ಚಿನ ಜ್ಞಾನ ಕೇಳಲ್ಪಡುವವನಿಗೆ ಇಲ್ಲ.”

ಆ ವ್ಯಕ್ತಿ ಕೇಳಿದರು: “ಅದರ ಚಿಹ್ನೆಗಳ ಬಗ್ಗೆ ನನಗೆ ತಿಳಿಸಿಕೊಡಿರಿ.”

ಪ್ರವಾದಿ(ﷺ)ರವರು ಹೇಳಿದರು: “ಒಬ್ಬ ದಾಸಿ ತನ್ನ ಒಡತಿಗೆ ಜನ್ಮ ನೀಡುವುದು, ಬರಿಗಾಲಿನವರೂ, ನಗ್ನರೂ, ನಿರ್ಗತಿಕರೂ ಆಗಿರುವ ಕುರುಬರು ಗಗನ ಚುಂಬಿ ಕಟ್ಟಡಗಳನ್ನು ನಿರ್ಮಿಸುವುದರಲ್ಲಿ ಪರಸ್ಪರ ಅಹಂಕಾರಪಡುವುದು.”

ತರುವಾಯ ಆ ವ್ಯಕ್ತಿ ನಿರ್ಗಮಿಸಿದರು.

ಸ್ವಲ್ಪ ಸಮಯದ ನಂತರ ಪ್ರವಾದಿ(ﷺ)ರವರು ಕೇಳಿದರು: “ಓ ಉಮರ್, ಆ ವ್ಯಕ್ತಿ ಯಾರೆಂದು ತಮಗೆ ಗೊತ್ತೆ?”

ಅವರು (ಉಮರ್) ಹೇಳಿದರು: “ಅಲ್ಲಾಹು ಮತ್ತು ಅವನ ರಸೂಲರಿಗೆ ಮಾತ್ರ ಗೊತ್ತು.”

ಪ್ರವಾದಿ(ﷺ)ರವರು ಹೇಳಿದರು: “ಅವರು ಜಿಬ್‌ರೀಲ್, ನಿಮಗೆ ನಿಮ್ಮ ಧರ್ಮವನ್ನು ಕಲಿಸಲು ಅವರು ಬಂದಿದ್ದರು.” [ಅಲ್‌ಬುಖಾರೀ ಮತ್ತು ಮುಸ್ಲಿಮ್]

# الْأَصْلُ الثَّالِثُ : مَعْرِفَةُ نَبِيِّكُمْ مُحَمَّدٍ صَلَّى اللَّهُ عَلَيْهِ وَسَلَّمَ

# ಮೂರನೆಯ ನಿಯಮ: ನಿಮ್ಮ ಪ್ರವಾದಿ ಮುಹಮ್ಮದ್(ﷺ)ರವರನ್ನು ಅರಿಯುವುದು

ಅವರು ಮುಹಮ್ಮದ್ ಇಬ್ನ್ ಅಬ್ದಿಲ್ಲಾಹ್ ಇಬ್ನ್ ಅಬ್ದಿಲ್ ಮುತ್ತಲಿಬ್ ಇಬ್ನ್ ಹಾಶಿಮ್ ಆಗಿದ್ದಾರೆ. ಹಾಶಿಮ್ ಕುರೈಶ್‍ರಿಂದ, ಕುರೈಶ್ ಅರಬಿಗಳಿಂದ ಮತ್ತು ಅರಬಿಗಳು ಇಸ್ಮಾಈಲ್ ಇಬ್ನ್ ಇಬ್ರಾಹೀಮ್ ಅಲ್ ಖಲೀಲ್(ﷺ)ರವರ ಸಂತತಿಯಲ್ಲಿ ಸೇರಿದವರಾಗಿದ್ದಾರೆ. ಅವರ ಮೇಲೆ ಮತ್ತು ನಮ್ಮ ಪ್ರವಾದಿಯ ಮೇಲೆ ಅಲ್ಲಾಹನ ಸಲಾತ್ ಮತ್ತು ಸಲಾಮ್ ಇರಲಿ. ಅವರು ಅರವತ್ತಮೂರು ವರ್ಷ ಬದುಕಿದ್ದರು. ಅದರಲ್ಲಿ ನಲ್ವತ್ತು ವರ್ಷ ಪ್ರವಾದಿತ್ವಕ್ಕೆ ಮುಂಚೆ ಮತ್ತು ಇಪ್ಪತ್ತಮೂರು ವರ್ಷ ಪ್ರವಾದಿ ಮತ್ತು ಸಂದೇಶವಾಹಕರಾಗಿ ಬದುಕಿದ್ದರು. 'ಇಕ್ರಅ್'ನಿಂದ ಅವರ ಪ್ರವಾದಿತ್ವದ ಆರಂಭವಾಯಿತು, 'ಅಲ್‍ಮುದ್ದಸ್ಸಿರ್'ನಿಂದ ಅವರ ಸಂದೇಶವಾಹಕತ್ವದ ಆರಂಭವಾಯಿತು. ಅವರ ಊರು ಮಕ್ಕಃ, ಅಲ್ಲಿಂದ ಮದೀನಕ್ಕೆ ಹಿಜ್ರಾ ಹೋದರು. ಶಿರ್ಕ್‍ನ ಬಗ್ಗೆ ಮುನ್ನೆಚ್ಚರಿಕೆ ನೀಡುವವರಾಗಿ, ತೌಹೀದ್‍ನೆಡೆಗೆ ಆಹ್ವಾನಿಸುವವರಾಗಿ ಅವರನ್ನು ಕಳುಹಿಸಲಾಯಿತು.

ಪುರಾವೆ ಅಲ್ಲಾಹನ ಈ ವಚನ:

﴿ يَا أَيُّهَا الْمُدَّثِّرُ * قُمْ فَأَنْذِرْ * وَرَبَّكَ فَكَبِّرْ * وَثِيَابَكَ فَطَهِّرْ * وَالرُّجْزَ فَاهْجُرْ * وَلَا تَمْنُنْ تَسْتَكْثِرُ * وَلِرَبِّكَ فَاصْبِرْ ﴾

**"ಓ ಹೊದಿಸಲಾಗಿರುವವರೇ! ಎದ್ದೇಳಿರಿ! (ಜನರಿಗೆ) ಎಚ್ಚರಿಕೆ ನೀಡಿರಿ. ತಮ್ಮ ರಬ್ಬ್‍ನನ್ನು ಮಹತ್ವಪಡಿಸಿರಿ. ತಮ್ಮ ಉಡುಪುಗಳನ್ನು ಶುದ್ಧೀಕರಿಸಿರಿ. ರುಜ್‍ಝ್**

**ಗಳನ್ನು ವರ್ಜಿಸಿರಿ. ಹೆಚ್ಚಿನ ಲಾಭವನ್ನು ಆಶಿಸಿ ತಾವು ಉದಾರತೆ ತೋರದಿರಿ. ತಮ್ಮ ರಬ್ಬ್ ಗೋಸ್ಕರ ತಾಳ್ಮೆ ವಹಿಸಿರಿ.” [ಕುರ್‌ಆನ್ 74:1–7]**

‘ಎದ್ದೇಳಿರಿ! (ಜನರಿಗೆ) ಎಚ್ಚರಿಕೆ ನೀಡಿರಿ’ ಎಂಬುದರ ಅರ್ಥವು– ಶಿರ್ಕ್‌ನ ಬಗ್ಗೆ ಮುನ್ನೆಚ್ಚರಿಕೆ ನೀಡಿರಿ ಮತ್ತು ತೌಹೀದ್‌ನೆಡೆಗೆ ಆಹ್ವಾನಿಸಿರಿ ಎಂದಾಗಿದೆ. ‘ತಮ್ಮ ರಬ್ಬ್‌ನನ್ನು ಮಹತ್ವಪಡಿಸಿರಿ’ ಎಂದರೆ– ತೌಹೀದ್‌ನೊಂದಿಗೆ ಅವನನ್ನು ಮಹತ್ವಪಡಿಸಿರಿ ಎಂದಾಗಿದೆ. ‘ತಮ್ಮ ಉಡುಪುಗಳನ್ನು ಶುದ್ಧೀಕರಿಸಿರಿ’ ಎಂದರೆ– ತಮ್ಮ ಕೆಲಸ ಕಾರ್ಯಗಳನ್ನು ಶಿರ್ಕ್‌ನಿಂದ ಶುದ್ಧೀಕರಿಸಿರಿ ಎಂದಾಗಿದೆ. ‘ರುಜ್ಝ್‌ಗಳನ್ನು ವರ್ಜಿಸಿರಿ’ –ರುಜ್ಝ್‌ಗಳೆಂದರೆ ವಿಗ್ರಹಗಳು– ಅವುಗಳನ್ನು ವರ್ಜಿಸುವುದೆಂದರೆ ಅವುಗಳನ್ನೂ ಅವುಗಳ ಜನರನ್ನೂ ತ್ಯಜಿಸುವುದು, ಅವುಗಳಿಂದಲೂ ಅವುಗಳ ಜನರಿಂದಲೂ ಮುಕ್ತನಾಗುವುದು.

ಹೀಗೆ ಪ್ರವಾದಿ(ﷺ)ರವರು ಹತ್ತು ವರ್ಷಗಳ ಕಾಲ ಜನರನ್ನು ತೌಹೀದ್‌ನೆಡೆಗೆ ಆಹ್ವಾನಿಸಿದರು, ಹತ್ತನೆ ವರ್ಷದ ನಂತರ ಆಕಾಶಕ್ಕೆ ಮಿಅ್‌ರಾಜ್ ಹೋದರು, ನಂತರ ಐದು ವೇಳೆಯ ನಮಾಝ್ ಕಡ್ಡಾಯವಾಯಿತು. ಮೂರು ವರ್ಷಗಳ ಕಾಲ ಮಕ್ಕಃದಲ್ಲಿ ನಮಾಝ್ ಮಾಡಿದರು, ನಂತರ ಅವರಿಗೆ ಮದೀನಕ್ಕೆ ಹಿಜ್ರಾ ಹೋಗಲು ಆದೇಶಿಸಲಾಯಿತು. ಶಿರ್ಕ್‌ನ ನಾಡಿನಿಂದ ಇಸ್ಲಾಮಿನ ನಾಡಿಗೆ ಹಿಜ್ರಾ ಹೋಗುವುದು ಈ ಸಮುದಾಯದ ಮೇಲೆ ಕಡ್ಡಾಯವಾಗಿದೆ. ಅದರ ಅವಧಿಯು ಅಂತ್ಯದಿನದವರೆಗೂ ಇದೆ.

ಪುರಾವೆ ಅಲ್ಲಾಹನ ಈ ವಚನ:

﴿ إِنَّ الَّذِينَ تَوَفَّاهُمُ الْمَلَائِكَةُ ظَالِمِي أَنْفُسِهِمْ قَالُوا فِيمَ كُنْتُمْ قَالُوا كُنَّا مُسْتَضْعَفِينَ فِي الْأَرْضِ قَالُوا أَلَمْ تَكُنْ أَرْضُ اللَّهِ وَاسِعَةً فَتُهَاجِرُوا فِيهَا فَأُولَـٰئِكَ مَأْوَاهُمْ جَهَنَّمُ وَسَاءَتْ مَصِيرًا * إِلَّا الْمُسْتَضْعَفِينَ مِنَ الرِّجَالِ وَالنِّسَاءِ وَالْوِلْدَانِ لَا يَسْتَطِيعُونَ حِيلَةً وَلَا يَهْتَدُونَ سَبِيلًا * فَأُولَـٰئِكَ عَسَى اللَّهُ أَنْ يَعْفُوَ عَنْهُمْ وَكَانَ اللَّهُ عَفُوًّا غَفُورًا ﴾

**“(ಅವಿಶ್ವಾಸಿಗಳ ನಡುವೆಯೇ ಬದುಕುತ್ತಾ) ಸ್ವತಃ ತಮ್ಮ ಮೇಲೆಯೇ ಅನ್ಯಾಯವೆಸಗಿದವರನ್ನು ಮೃತಪಡಿಸುವಾಗ ಮಲಕ್‌ಗಳು ಅವರೊಂದಿಗೆ ‘ನೀವು ಯಾವ ಸ್ಥಿತಿಯಲ್ಲಿದ್ದಿರಿ?’ ಎಂದು ಕೇಳುವರು. ‘ನಾವು ನಾಡಿನಲ್ಲಿ ಮರ್ದಿತ ರಾಗಿದ್ದೆವು.’ ಎಂದು ಅವರು ಹೇಳುವರು. ಆಗ (ಮಲಕ್‌ಗಳು) ‘ನಿಮಗೆ ನಿಮ್ಮ ಊರನ್ನು ಬಿಟ್ಟು ಎಲ್ಲಾದರೂ ಹೋಗಬಹುದಾದ ರೀತಿಯಲ್ಲಿ ಅಲ್ಲಾಹನ ಭೂಮಿ ವಿಶಾಲವಾಗಿರಲಿಲ್ಲವೇ?’ ಎಂದು ಕೇಳುವರು. ಅಂತಹವರ ವಾಸಸ್ಥಳವು ನರಕವಾಗಿದೆ. ಆ ಸ್ಥಳವು ಎಷ್ಟು ನಿಕೃಷ್ಟವಾದುದು! ಆದರೆ ಯಾವುದೇ ಉಪಾಯವನ್ನು ಹೂಡಲು ಸಾಧ್ಯವಾಗದೆ, ಯಾವುದೇ ರಕ್ಷಾಮಾರ್ಗವನ್ನೂ ಕಾಣಲಾಗದೆ ದಬ್ಬಾಳಿಕೆಗೀಡಾಗಿ ಬದುಕುತ್ತಿರುವ ಪುರುಷರು, ಸ್ತ್ರೀಯರು ಮತ್ತು ಮಕ್ಕಳು ಇದರಿಂದ ಹೊರತಾಗಿರುವರು. ಅಂತಹವರನ್ನು ಅಲ್ಲಾಹು ಮನ್ನಿಸಲೂ ಬಹುದು. ಅಲ್ಲಾಹು ಅತ್ಯಂತ ಮನ್ನಿಸುವವನೂ ಅತ್ಯಧಿಕ ಕ್ಷಮಿಸುವವನೂ ಆಗಿರುವನು.” [ಕುರ್‌ಆನ್ 4:97–99]**

﴿ يَا عِبَادِيَ الَّذِينَ آمَنُوا إِنَّ أَرْضِي وَاسِعَةٌ فَإِيَّايَ فَاعْبُدُونِ ﴾

**“ಓ ವಿಶ್ವಾಸಿಗಳಾದ ನನ್ನ ದಾಸರೇ, ಖಂಡಿತವಾಗಿಯೂ ನನ್ನ ಭೂಮಿ ವಿಶಾಲ ವಾಗಿದೆ. ಆದ್ದರಿಂದ ನನ್ನನ್ನು ಮಾತ್ರ ಆರಾಧಿಸಿರಿ.” [ಕುರ್‌ಆನ್ 29:56]**

ಅಲ್‌ಬಗವೀ ಹೇಳುತ್ತಾರೆ:

سَبَبُ نُزُولِ هَذِهِ الْآيَةِ فِي الْمُسْلِمِينَ الَّذِينَ بِمَكَّةَ لَمْ يُهَاجِرُوا، نَادَاهُمُ اللهُ بِاسْمِ الْإِيمَانِ

**“ಈ ಆಯತ್ ಅವತೀರ್ಣಗೊಂಡದ್ದು ಹಿಜ್ರಾ ಮಾಡದೆ ಮಕ್ಕಃದಲ್ಲೇ ಉಳಿದ ಮುಸ್ಲಿಮರ ಕುರಿತಾಗಿದೆ. ಅಲ್ಲಾಹು ಅವರನ್ನು ವಿಶ್ವಾಸಿಗಳೆಂದು ಕರೆದಿದ್ದಾನೆ.”**

ಹಿಜ್ರಾಗೆ ಸುನ್ನತ್‌ನಲ್ಲಿರುವ ಪುರಾವೆ ಪ್ರವಾದಿ(ﷺ)ರವರ ಈ ವಚನ:

« لَا تَنْقَطِعُ الْهِجْرَةُ حَتَّى تَنْقَطِعَ التَّوْبَةُ وَلَا تَنْقَطِعُ التَّوْبَةُ حَتَّى تَطْلُعَ الشَّمْسُ مِنْ مَغْرِبِهَا »

**"ತೌಬಾ (ಪಶ್ಚಾತ್ತಾಪ)ದ ಅವಧಿಯು ಮುಗಿಯುವವರೆಗೆ ಹಿಜ್ರಾದ ಅವಧಿಯು ಮುಗಿಯುವುದಿಲ್ಲ. ಸೂರ್ಯನು ಪಶ್ಚಿಮದಿಂದ ಉದಯವಾಗುವವರೆಗೆ ತೌಬಾದ ಅವಧಿಯು ಮುಗಿಯುವುದಿಲ್ಲ." [ಅಬೂ ದಾವೂದ್]**

ಪ್ರವಾದಿ(ﷺ)ರವರು ಮದೀನದಲ್ಲಿ ನೆಲೆನಿಂತ ನಂತರ ಶರೀಅತ್‌ನ ಉಳಿದ ನಿಯಮಗಳನ್ನು ಆದೇಶಿಸಿದರು. ಉದಾ: ಝಕಾತ್, ಉಪವಾಸ, ಹಜ್ಜ್, ಅದಾನ್, ಜಿಹಾದ್, ಸದಾಚಾರದ ಆಜ್ಞೆ, ದುರಾಚಾರದ ವಿರೋಧ ಮತ್ತಿತರ ನಿಯಮಗಳನ್ನು ಉಳಿದ ಹತ್ತು ವರ್ಷಗಳಲ್ಲಿ ಪೂರ್ಣಗೊಳಿಸಿದರು. ತರುವಾಯ ಅವರು ಮೃತಪಟ್ಟರು ಹಾಗೂ ಅವರ ಧರ್ಮವು ಉಳಿಯಿತು.

ಇದೇ ಅವರ ದೀನ್. ಅವರು ತಮ್ಮ ಸಮುದಾಯಕ್ಕೆ ಸೂಚಿಸದ ಒಳಿತುಗಳಿಲ್ಲ. ಅವರು ಎಚ್ಚರಿಸದ ಕೆಡುಕುಗಳಿಲ್ಲ. ತೌಹೀದ್ ಮತ್ತು ಅಲ್ಲಾಹು ಇಷ್ಟಪಡುವ ಮತ್ತು ತೃಪ್ತಿಪಡುವ ಎಲ್ಲ ಒಳಿತುಗಳನ್ನೂ ಅವರು ಸೂಚಿಸಿದ್ದರು. ಶಿರ್ಕ್ ಮತ್ತು ಅಲ್ಲಾಹು ಅಸಹ್ಯಪಡುವ ಮತ್ತು ತಿರಸ್ಕರಿಸುವ ಎಲ್ಲ ಕೆಡುಕುಗಳ ಬಗ್ಗೆಯೂ ಅವರು ಎಚ್ಚರಿಸಿದ್ದರು. ಅಲ್ಲಾಹು ಅವರನ್ನು ಸಂಪೂರ್ಣ ಮನುಕುಲದೆಡೆಗೆ ಕಳುಹಿಸಿದ್ದಾನೆ. ಜಿನ್ನ್ ಮತ್ತು ಮನುಷ್ಯರ ಮೇಲೆ ಅವರ ಅನುಸರಣೆ ಮಾಡುವುದನ್ನು ಕಡ್ಡಾಯ ಗೊಳಿಸಿದ್ದಾನೆ.

ಪುರಾವೆ ಅಲ್ಲಾಹನ ಈ ವಚನ:

﴿ قُلْ يَا أَيُّهَا النَّاسُ إِنِّي رَسُولُ اللَّهِ إِلَيْكُمْ جَمِيعًا ﴾

**"ಹೇಳಿರಿ: ಓ ಜನರೇ, ನಾನು ನಿಮ್ಮೆಲ್ಲರ ಕಡೆಗಿರುವ ಅಲ್ಲಾಹನ ಸಂದೇಶವಾಹಕ ನಾಗಿದ್ದೇನೆ." [ಕುರ್‌ಆನ್ 7:158]**

ಅಲ್ಲಾಹು ಅವರ ಮೂಲಕ ಧರ್ಮವನ್ನು ಪೂರ್ಣಗೊಳಿಸಿದನು.

ಪುರಾವೆ ಅಲ್ಲಾಹನ ಈ ವಚನ:

﴿ الْيَوْمَ أَكْمَلْتُ لَكُمْ دِينَكُمْ وَأَتْمَمْتُ عَلَيْكُمْ نِعْمَتِي وَرَضِيتُ لَكُمُ الْإِسْلَامَ دِينًا ﴾

**“ಇಂದು ನಾನು ನಿಮಗೆ ನಿಮ್ಮ ಧರ್ಮವನ್ನು ಪೂರ್ತೀಕರಿಸಿರುವೆನು, ಮತ್ತು ನಿಮ್ಮ ಮೇಲೆ ನನ್ನ ಅನುಗ್ರಹವನ್ನು ಪೂರ್ಣಗೊಳಿಸಿರುವೆನು, ಹಾಗೂ ಇಸ್ಲಾಮನ್ನು ನಿಮಗೊಂದು ಧರ್ಮವನ್ನಾಗಿ ನಾನು ತೃಪ್ತಿಪಟ್ಟಿರುವೆನು.” [ಕುರ್‌ಆನ್ 5:3]**

ಪ್ರವಾದಿ(ﷺ)ರವರು ನಿಧನರಾಗಿದ್ದಾರೆ ಎಂಬುದಕ್ಕೆ ಪುರಾವೆ ಅಲ್ಲಾಹನ ಈ ವಚನ:

﴿ إِنَّكَ مَيِّتٌ وَإِنَّهُمْ مَيِّتُونَ * ثُمَّ إِنَّكُمْ يَوْمَ الْقِيَامَةِ عِنْدَ رَبِّكُمْ تَخْتَصِمُونَ ﴾

**“ಖಂಡಿತವಾಗಿಯೂ ತಾವು ಮರಣ ಹೊಂದುವಿರಿ ಮತ್ತು ಖಂಡಿತವಾಗಿಯೂ ಅವರೂ ಮರಣಹೊಂದುವರು. ನಂತರ ಅಂತ್ಯದಿನದಂದು ನಿಮ್ಮ ರಬ್ಬ್‌ನ ಬಳಿ ಖಂಡಿತವಾಗಿಯೂ ನೀವು ತರ್ಕಿಸುತ್ತಿರುವಿರಿ.” [ಕುರ್‌ಆನ್ 39:30–31]**

ಜನರು ಮೃತಪಟ್ಟ ನಂತರ ಪುನರ್ಜೀವಗೊಳ್ಳುವರು ಎಂಬುದಕ್ಕೆ ಪುರಾವೆ ಅಲ್ಲಾಹನ ಈ ವಚನ:

﴿ مِنْهَا خَلَقْنَاكُمْ وَفِيهَا نُعِيدُكُمْ وَمِنْهَا نُخْرِجُكُمْ تَارَةً أُخْرَىٰ ﴾

**“ನಿಮ್ಮನ್ನು ನಾವು ಅದರಿಂದ (ಮಣ್ಣಿನಿಂದ) ಸೃಷ್ಟಿಸಿದೆವು, ಮತ್ತು ಅದರೆಡೆಗೆ ಮರಳಿಸುವೆವು, ಮತ್ತು ಪುನಃ ಎರಡನೆ ಬಾರಿಗೆ ಅದರಿಂದ ಹೊರತೆಗೆಯುವೆವು.” [ಕುರ್‌ಆನ್ 20:55]**

﴿ وَاللَّهُ أَنْبَتَكُمْ مِنَ الْأَرْضِ نَبَاتًا * ثُمَّ يُعِيدُكُمْ فِيهَا وَيُخْرِجُكُمْ إِخْرَاجًا ﴾

**“ಅಲ್ಲಾಹು ನಿಮ್ಮನ್ನು ಭೂಮಿಯಿಂದ ಒಂದು ಬೆಳೆಯಾಗಿ ಬೆಳೆಸಿರುವನು. ತರುವಾಯ ಅವನು ನಿಮ್ಮನ್ನು ಅದಕ್ಕೆ ಮರಳಿಸುವನು ಮತ್ತು ಒಮ್ಮೆ ನಿಮ್ಮನ್ನು ಹೊರತರುವನು.” [ಕುರ್‌ಆನ್ 71:17–18]**

ಪುನರ್ಜೀವಗೊಂಡ ನಂತರ ವಿಚಾರಣೆಗೊಳಪಡುವರು ಮತ್ತು ತಮ್ಮ ಕರ್ಮಗಳಿಗನುಗುಣವಾಗಿ ಪ್ರತಿಫಲವನ್ನು ಪಡೆಯುವರು.

ಪುರಾವೆ ಅಲ್ಲಾಹನ ಈ ವಚನ:

﴿ وَلِلَّهِ مَا فِي السَّمَاوَاتِ وَمَا فِي الْأَرْضِ لِيَجْزِيَ الَّذِينَ أَسَاءُوا بِمَا عَمِلُوا وَيَجْزِيَ الَّذِينَ أَحْسَنُوا بِالْحُسْنَى ﴾

**“ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅಲ್ಲಾಹುವಿನದ್ದಾಗಿವೆ. ದುಷ್ಕರ್ಮವೆಸಗಿದವರಿಗೆ ಅವರು ಮಾಡಿರುವುದಕ್ಕಿರುವ ಪ್ರತಿಫಲವನ್ನು ನೀಡುವ ಸಲುವಾಗಿ ಮತ್ತು ಸತ್ಕರ್ಮವೆಸಗಿದವರಿಗೆ ಅತ್ಯುತ್ತಮ ಪ್ರತಿಫಲವನ್ನು ನೀಡುವ ಸಲುವಾಗಿ.” [ಕುರ್‌ಆನ್ 53:31]**

ಪುನರುತ್ಥಾನವನ್ನು ನಿಷೇಧಿಸುವವನು ಕಾಫಿರ್ ಆಗುವನು.

ಪುರಾವೆ ಅಲ್ಲಾಹನ ಈ ವಚನ:

﴿ زَعَمَ الَّذِينَ كَفَرُوا أَنْ لَنْ يُبْعَثُوا قُلْ بَلَى وَرَبِّي لَتُبْعَثُنَّ ثُمَّ لَتُنَبَّؤُنَّ بِمَا عَمِلْتُمْ وَذَلِكَ عَلَى اللَّهِ يَسِيرٌ ﴾

**“ತಮ್ಮನ್ನು ಪುನರುತ್ಥಾನಗೊಳಿಸಲಾಗುವುದಿಲ್ಲ ಎಂದು ಸತ್ಯನಿಷೇಧಿಗಳು ವಾದಿಸಿದರು. (ಓ ಪ್ರವಾದಿಯವರೇ!) ಹೇಳಿರಿ: ‘ಹೌದು! ನನ್ನ ರಬ್ಬ್‌ನ ಮೇಲಾಣೆ! ಖಂಡಿತವಾಗಿಯೂ ನಿಮ್ಮನ್ನು ಪುನರುತ್ಥಾನಗೊಳಿಸಲಾಗುವುದು. ತರುವಾಯ ನೀವು ಮಾಡಿ ರುವುದರ ಬಗ್ಗೆ ನಿಮಗೆ ತಿಳಿಸಿಕೊಡಲಾಗುವುದು. ಅದು ಅಲ್ಲಾಹುವಿನ ಮಟ್ಟಿಗೆ ಅತಿ ಸುಲಭವಾಗಿದೆ’.” [ಕುರ್‌ಆನ್ 64:7]**

ಅಲ್ಲಾಹು ಎಲ್ಲಾ ಸಂದೇಶವಾಹಕರನ್ನೂ ಸುವಾರ್ತೆ ಮತ್ತು ಮುನ್ನೆಚ್ಚರಿಕೆ ನೀಡುವ ವರಾಗಿ ಕಳುಹಿಸಿದನು.

ಪುರಾವೆ ಅಲ್ಲಾಹನ ಈ ವಚನ:

﴿ رُسُلًا مُبَشِّرِينَ وَمُنْذِرِينَ لِئَلَّا يَكُونَ لِلنَّاسِ عَلَى اللَّهِ حُجَّةٌ بَعْدَ الرُّسُلِ وَكَانَ اللَّهُ عَزِيزًا حَكِيمًا ﴾

**"ಸುವಾರ್ತೆ ಮತ್ತು ಮುನ್ನೆಚ್ಚರಿಕೆಯನ್ನು ನೀಡುವ ಸಂದೇಶವಾಹಕರು. ಸಂದೇಶ ವಾಹಕರ (ಆಗಮನದ) ನಂತರ ಅಲ್ಲಾಹನಿಗೆದುರಾಗಿ ಜನರಿಗೆ ಯಾವುದೇ ರೀತಿಯ ಪುರಾವೆಯಿಲ್ಲದಿರಲಿಕ್ಕಾಗಿ." [ಕುರ್‌ಆನ್ 4:165]**

ಅವರಲ್ಲಿ (ರಸೂಲ್‌ಗಳಲ್ಲಿ) ಮೊದಲನೆಯವರು ನೂಹ್(ﷺ) ಮತ್ತು ಕೊನೆಯ ವರು ಮುಹಮ್ಮದ್(ﷺ)ರವರಾಗಿದ್ದಾರೆ. ನೂಹ್(ﷺ)ರವರು ಮೊದಲನೆಯ ವರು ಎಂಬು ದಕ್ಕೆ ಪುರಾವೆ ಅಲ್ಲಾಹನ ಈ ವಚನ:

﴿ إِنَّا أَوْحَيْنَا إِلَيْكَ كَمَا أَوْحَيْنَا إِلَى نُوحٍ وَالنَّبِيِّينَ مِنْ بَعْدِهِ ﴾

**"ನೂಹ್ ಮತ್ತು ಅವರ ನಂತರದ ಪ್ರವಾದಿಗಳಿಗೆ ವಹ್ಯನ್ನು ನೀಡಿದಂತೆ ತಮಗೂ ನಾವು ವಹ್ಯನ್ನು ನೀಡಿದ್ದೇವೆ." [ಕುರ್‌ಆನ್ 4:163]**

ಅಲ್ಲಾಹನನ್ನು ಮಾತ್ರ ಆರಾಧಿಸಬೇಕೆಂದು ಆದೇಶಿಸುತ್ತಾ ಮತ್ತು ತಾಗೂತ್ ಗಳನ್ನು ಆರಾಧಿಸುವುದನ್ನು ವಿರೋಧಿಸುತ್ತಾ ನೂಹ್(ﷺ)ರಿಂದ ಮುಹಮ್ಮದ್ (ﷺ)ರವರೆಗೆ ಪ್ರತಿಯೊಂದು ಜನತೆಗೂ ಅಲ್ಲಾಹು ಸಂದೇಶವಾಹಕರನ್ನು ಕಳುಹಿಸಿದ್ದಾನೆ.

ಪುರಾವೆ ಅಲ್ಲಾಹನ ಈ ವಚನ:

﴿ وَلَقَدْ بَعَثْنَا فِي كُلِّ أُمَّةٍ رَسُولًا أَنِ اعْبُدُوا اللَّهَ وَاجْتَنِبُوا الطَّاغُوتَ ﴾

**“ಅಲ್ಲಾಹನನ್ನು ಆರಾಧಿಸಿರಿ ಮತ್ತು ತಾಗೂತ್‌ಗಳನ್ನು ವರ್ಜಿಸಿರಿ ಎಂಬ ಸಂದೇಶದೊಂದಿಗೆ ನಾವು ಪ್ರತಿಯೊಂದು ಜನತೆಗೂ ಸಂದೇಶವಾಹಕರನ್ನು ಕಳುಹಿಸಿದ್ದೇವೆ.” [ಕುರ್‌ಆನ್ 16:36]**

ಅಲ್ಲಾಹು ತನ್ನೆಲ್ಲಾ ದಾಸರಿಗೂ ತಾಗೂತ್‌ಗಳನ್ನು ತಿರಸ್ಕರಿಸಿ ಅಲ್ಲಾಹನಲ್ಲಿ ವಿಶ್ವಾಸವಿಡಬೇಕೆಂಬುದನ್ನು ಕಡ್ಡಾಯಗೊಳಿಸಿದ್ದಾನೆ.

ಇಬ್ನುಲ್ ಕಯ್ಯಿಮ್ ಹೇಳುತ್ತಾರೆ:

مَعْنَى الطَّاغُوتِ: مَا تَجَاوَزَ الْعَبْدُ حَدَّهُ مِنْ مَعْبُودٍ أَوْ مَتْبُوعٍ أَوْ مُطَاعٍ

**“ಆರಾಧನೆ ಅಥವಾ ಅನುಸರಣೆ ಅಥವಾ ಆಜ್ಞಾಪಾಲನೆಯ ವಿಷಯದಲ್ಲಿ ಮನುಷ್ಯನು ಯಾವುದರ ಬಗ್ಗೆ ಹದ್ದನ್ನು ಮೀರುತ್ತಾನೋ ಅದು ತಾಗೂತ್ ಆಗಿದೆ.”**

ತಾಗೂತ್‌ಗಳು ಹಲವಾರು ಇವೆ. ಅವುಗಳಲ್ಲಿ ಪ್ರಮುಖವಾದುದು ಐದು.

1. ಇಬ್ಲೀಸ್ (لعنة الله عليه)
2. ಜನರು ತನ್ನನ್ನು ಆರಾಧಿಸುವುದರ ಬಗ್ಗೆ ತೃಪ್ತಿಪಡುವವನು.
3. ತನ್ನ ಆರಾಧನೆಯೆಡೆಗೆ ಜನರಿಗೆ ಕರೆ ನೀಡುವವನು.
4. ಅಗೋಚರ ವಿಷಯಗಳನ್ನು ಅರಿತಿರುವೆನೆಂದು ವಾದಿಸುವವನು.
5. ಅಲ್ಲಾಹು ಅವತೀರ್ಣಗೊಳಿಸಿದ ಶರೀಅತ್ತಿನ ಪ್ರಕಾರವಲ್ಲದೆ ತೀರ್ಪು ನೀಡುವವನು.

ಪುರಾವೆ ಅಲ್ಲಾಹನ ಈ ವಚನ:

﴿ لَا إِكْرَاهَ فِي الدِّينِ قَدْ تَبَيَّنَ الرُّشْدُ مِنَ الْغَيِّ فَمَنْ يَكْفُرْ بِالطَّاغُوتِ وَيُؤْمِنْ بِاللَّهِ فَقَدِ اسْتَمْسَكَ بِالْعُرْوَةِ الْوُثْقَى لَا انْفِصَامَ لَهَا وَاللَّهُ سَمِيعٌ عَلِيمٌ ﴾

**“ಧರ್ಮದ ವಿಷಯದಲ್ಲಿ ಯಾವುದೇ ಬಲಾತ್ಕಾರವಿಲ್ಲ. ಸನ್ಮಾರ್ಗವು ದುರ್ಮಾರ್ಗ ದಿಂದ ಸ್ಪಷ್ಟವಾಗಿ ಬೇರ್ಪಟ್ಟು ನಿಂತಿದೆ. ಆದ್ದರಿಂದ ಯಾರು ತಾಗೂತ (ಮಿಥ್ಯಾರಾಧ್ಯರ)ನ್ನು ನಿಷೇಧಿಸಿ ಅಲ್ಲಾಹನಲ್ಲಿ ವಿಶ್ವಾಸವಿಡುವನೋ ಅವನು ಅತ್ಯಂತ ಬಲಿಷ್ಠವಾದ ಹಗ್ಗವನ್ನು ಹಿಡಿದಿರುವನು. ಅದೆಂದೂ ಕಡಿದು ಹೋಗಲಾರದು. ಅಲ್ಲಾಹು (ಎಲ್ಲವನ್ನು) ಆಲಿಸುವವನೂ ಅರಿಯುವವನೂ ಆಗಿರುವನು.” [ಕುರ್‌ಆನ್ 2:256]**

‘ಲಾ ಇಲಾಹ ಇಲ್ಲಲ್ಲಾಹ್’ ಎಂಬುದರ ತಾತ್ಪರ್ಯ ಇದೇ ಆಗಿದೆ.

ಹದೀಸಿನಲ್ಲಿ ವರದಿಯಾದ ಪ್ರಕಾರ:

« رَأْسُ الْأَمْرِ الْإِسْلَامُ ، وَعمُودُهُ الصَّلَاةُ ، وَذَرْوَةُ سَنَامِهِ الْجِهَادُ فِي سَبِيلِ اللّٰهِ »

**“ಧರ್ಮದ ಮುಖ್ಯ ಭಾಗ ಇಸ್ಲಾಮ್ ಆಗಿದೆ, ಅದರ ಸ್ಥಂಭಗಳು ನಮಾಝ್ ಆಗಿದೆ ಮತ್ತು ಅದರ ಪರಾಕಾಷ್ಠೆಯು ಜಿಹಾದ್ ಆಗಿದೆ.”** [ಅತ್ತಿರ್ಮಿದೀ]

ಹೆಚ್ಚು ಬಲ್ಲವನು ಅಲ್ಲಾಹನಾಗಿದ್ದಾನೆ. ಅಲ್‌ಉಸೂಲು ಸ್ಸಲಾಸಃ ಇಲ್ಲಿ ಕೊನೆಗೊಳು ತ್ತದೆ.

وَصَلَّى اللّٰهُ وَسَلَّم عَلَى نَبِيِّنَا مُحَمَّدٍ وَعَلَى آلِهِ وَصَحْبِهِ أَجْمَعِين .

*********